ಜನಪ್ರಿಯ ಗ್ರಂಥಮಾಲೆ

೩೧೨

# ಪ್ರಾಚೀನ ಭಾರತದಲ್ಲಿಯ ವಿದ್ಯಾಕೇಂದ್ರಗಳು

ಅನಂತ ಕುಲಕರ್ಣಿ



ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ

ಡಿಶಂಬರ, ೧೯೮೦

ಉಪನ್ಯಾಸ ಗ್ರಂಥಮಾಲೆ

೩೧೨

# ಪ್ರಾಚೀನ ಭಾರತದಲ್ಲಿಯ ವಿದ್ಯಾಕೇಂದ್ರಗಳು

ಅನಂತ ಕುಲಕರ್ಣಿ

ಎಂ.ಎ;ಎಂ.ಎಡ್.



ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಡಿಶಂಬರ, ೧೯೮೦

ಪ್ರಕಾಶಕರು :

**ಸಿ. ಎಸ್. ಕಣವಿ**

ನಿರ್ದೇಶಕರು, ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು

ಡಿಶಂಬರ, ೧೯೮೦



ಬೆಲೆ : ೫೦ ಪೈಸೆ

ಮುದ್ರಕರು :

**ಜಿ. ಬಿ. ಮನ್ವಾಚಾರ**

ಸಹಾಯಕ ನಿರ್ದೇಶಕರು

ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ

ಧಾರವಾಡ-೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವುದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ಎಂಟು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕ ಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧ ಪಟ್ಟ ವಿಷಯಗಳನ್ನು ಆಯ್ದುಕೊಂಡು, ಶಾಸ್ತ್ರಸಮ್ಮತವಾದ ಸರಣಿ ಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರ ಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನಭಾಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆ ಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸ ಮಾಲೆಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜ ವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೧೧ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿ ರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು–ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತ ಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

**ಕರ್ನಾಟಕ ವಿಶ್ವವಿದ್ಯಾಲಯ**
ಧಾರವಾಡ

**ಎಸ್. ಎಸ್. ಒಡೆಯರ**
ಕುಲಪತಿಗಳು

# ಅರಿಕೆ

೧೯೭೮ನೇ ಇಸ್ವಿಯ ಸಪ್ಟೆಂಬರ ಹನ್ನೆರಡನೇ ದಿನಾಂಕ ಸುಳೇಭಾವಿಯಲ್ಲಿ 'ಪ್ರಾಚೀನ ಭಾರತದಲ್ಲಿಯ ವಿದ್ಯಾಕೇಂದ್ರಗಳು' ಎಂಬ ವಿಷಯದ ಮೇಲೆ ಉಪನ್ಯಾಸ ಮಾಡಿದೆನು. ಈ ಉಪನ್ಯಾಸದ ವಿಸ್ತೃತರೂಪವೇ ಈ ಪುಸ್ತಕ. ಈ ಅವಕಾಶವನ್ನು ಒದಗಿಸಿಕೊಟ್ಟ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಅಧಿಕಾರಿಗಳಾದ ಶ್ರೀ ಚೆನ್ನವೀರ ಕಣವಿ ಹಾಗು ಶ್ರೀ ಎಲ್. ಎಂ. ಗುಡ್ಡೀನ ಅವರಿಗೆ ನಾನು ಕೃತಜ್ಞನಾಗಿರುವೆನು. ಹಸ್ತಪ್ರತಿಯನ್ನು ಆಮೂಲಾಗ್ರವಾಗಿ ಓದಿ ಉಪಯುಕ್ತವಾದ ಸಲಹೆ ಸೂಚನೆಗಳನ್ನು ಕೊಟ್ಟ ನನ್ನ ಮಿತ್ರರಾದ ಶ್ರೀ ಆರ್. ಡಿ. ಕರಜಗಿ ಅವರಿಗೆ ನನ್ನ ವಂದನೆಗಳು. ಈ ಉಪನ್ಯಾಸವನ್ನು ಸಿದ್ಧಪಡಿಸುವಾಗ ಅನೇಕ ಗ್ರಂಥಗಳನ್ನು ಅವಲೋಕಿಸಬೇಕಾಯಿತು. ಈ ಗ್ರಂಥಗಳ ಎಲ್ಲ ಲೇಖಕರಿಗೂ ನಾನು ಋಣಿಯಾಗಿರುವೆನು. ಈ ಪುಸ್ತಕವು ಜನಸಾಮಾನ್ಯರಿಗೆ ಉಪಯೋಗವಾಗಲೆಂದು ಬರೆಯಲಾಗಿದೆ. ಆದ್ದರಿಂದ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿರುವ ಅಂಶಗಳನ್ನು ಇಲ್ಲಿ ಪ್ರತಿಪಾದಿಸಿರುವದಿಲ್ಲ. ಅದರಲ್ಲಿಯೂ ವಿದ್ಯಾಕೇಂದ್ರಗಳ ಕಾಲಗಳ ಬಗ್ಗೆ ಸಾಕಷ್ಟು ಭಿನ್ನಾಭಿಪ್ರಾಯಗಳಿರುವವು. ಅಂಥ ವಿಷಯಗಳನ್ನು ಕೈಬಿಡಲಾಗಿದೆ. ಬಹಳ ಜನ ವಿದ್ವಾಂಸರು ಒಪ್ಪಿಕೊಂಡ ವಿಷಯಗಳ ಬಗ್ಗೆ ಮಾತ್ರ ಇಲ್ಲಿ ಬರೆಯಲಾಗಿದೆ. ಸುಮಾರು ಹನ್ನೆರಡನೇ ಶತಮಾನದ ಪೂರ್ವದಲ್ಲಿದ್ದ ವಿದ್ಯಾಕೇಂದ್ರಗಳ ಬಗ್ಗೆ ಮಾತ್ರ ಇಲ್ಲಿ ಬರೆಯಲಾಗಿದೆ.

ಬೆಳಗಾವಿ
೨೫–೧೨–೭೮

**ಅನಂತ ಕುಲಕರ್ಣಿ**

## ಪರಿವಿಡಿ

# ಪೀಠಿಕೆ

ಜಗತ್ತಿನಲ್ಲಿ ಅನೇಕ ಸಂಸ್ಕೃತಿಗಳು ಉದಯವಾಗಿ ಅಸ್ತಂಗತವಾದವು. ಆ ಸಂಸ್ಕೃತಿಗಳ ಕುರುಹುಗಳು ಮಾತ್ರ ನಮಗೆ ದೊರೆಯುವವು. ಭಾರತೀಯ ಸಂಸ್ಕೃತಿಯು ಮಾತ್ರ ಇದಕ್ಕೆ ಅಪವಾದವಾಗಿರುವದು. ಸಾವಿರಾರು ವರ್ಷಗಳಿಂದ ಈ ಸಂಸ್ಕೃತಿ ತಿಯು ಅವ್ಯಾಹತವಾಗಿ ಪ್ರವಾಹೋಪಾದಿಯಲ್ಲಿ ಮುಂದೆ ಸಾಗುತ್ತಿರುವುದು. ನಮ್ಮ ಸಂಸ್ಕೃತಿಯು ಅನೇಕ ಆಘಾತಗಳಿಗೆ ಒಳಗಾಯಿತು. ಎಂಥ ಸಮಯದಲ್ಲಿಯೂ ಈ ಸಂಸ್ಕೃತಿಯು ನಾಶವಾಗಲಿಲ್ಲ. ತನ್ನ ಅಂತಃ ಸತ್ವವನ್ನು ಉಳಿಸಿಕೊಂಡು ಮುಂದೆ ಸಾಗಿದೆ. ಅನೇಕ ಸಂಸ್ಕೃತಿಗಳ ಪ್ರಭಾವವು ನಮ್ಮ ಮೇಲೆ ಆಗಿ ರುವದು. ನಂಜುಂಡನಂತೆ ನಮ್ಮ ಸಂಸ್ಕೃತಿಯು ಎಲ್ಲವನ್ನು ಅರಗಿಸಿಕೊಂಡಿರುವದು. ಇಸ್ಲಾಂ ಮತ್ತು ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವನ್ನು ನಾವು ಸಹಜವಾಗಿ ಗುರುತಿಸ ಬಹುದು. ಆದರೂ ನಮ್ಮ ಸಂಸ್ಕೃತಿಯು ಪೂರ್ಣವಾಗಿ ಬದ ಲಾವಣೆ ಹೊಂದಿಲ್ಲ. ತನ್ನ ವಿಶಿಷ್ಟವಾದ ಗುಣವನ್ನು ಕಳೆದು ಕೊಂಡಿಲ್ಲ. ಬೇರೆ ಸಂಸ್ಕೃತಿಗಳಲ್ಲಿಯ ಒಳ್ಳೇ ಅಂಶಗಳನ್ನು ಹೀರಿ ಕೊಂಡು ಅದು ಹೆಮ್ಮರವಾಗಿ ಬೆಳೆದಿರುವದು. ಇದೊಂದು ಮಹಾವಟವೃಕ್ಷವು. ಇಲ್ಲಿ ವಿವಿಧತೆಯನ್ನು ಕಾಣಬಹುದು. ಈ ವಿವಿಧತೆಯಲ್ಲಿಯೇ ನಮ್ಮ ವೈಶಿಷ್ಟವಿರುವದು. ನಮ್ಮ ಸಂಸ್ಕೃತಿಯು ಹೇಗಿರುವದೋ ಅದೇ ಪ್ರಕಾರದ ಶಿಕ್ಷಣ ಪದ್ಧತಿಯು

ರೂಢಿಯಲ್ಲಿರುವದು ಸ್ವಾಭಾವಿಕವಷ್ಟೇ ? ಪ್ರಾಚೀನ ಭಾರತೀಯ ಸಂಸ್ಕೃತಿಯನ್ನು ಅರಿತುಕೊಂಡರೆ ನಮ್ಮ ಶಿಕ್ಷಣ ಪದ್ಧತಿಯ ಲಕ್ಷಣಗಳು ತಿಳಿಯುವವು. ಶಿಕ್ಷಣ ಮತ್ತು ಸಂಸ್ಕೃತಿ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ, ಒಂದೇ ರಥದ ಎರಡು ಗಾಲಿಗಳಿದ್ದಂತೆ.

ಭಾರತ ಭೂಮಿಯು ಅನೇಕ ಮತಸ್ಥಾಪಕರ ನೆಲೆವೀಡು. ಬುದ್ಧ, ಮಹಾವೀರ, ಬಸವೇಶ್ವರ, ಗುರುನಾನಕ, ಮೊದಲಾದ ಮತ ಸ್ಥಾಪಕರು ಇಲ್ಲಿ ಆಗಿ ಹೋದರು. ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ ಕಬೀರ್, ಮೊದಲಾದವರು ಧಾರ್ಮಿಕ ಸುಧಾರಣೆಗಳನ್ನು ಮಾಡಲು ಯತ್ನಿಸಿದರು. ನಮ್ಮ ದೇಶದಲ್ಲಿ ಹಲವಾರು ಧರ್ಮಗಳು ಪ್ರಚಾರದಲ್ಲಿರುವದರಿಂದ ಸ್ವಾಭಾವಿಕವಾಗಿಯೇ ನಮ್ಮಲ್ಲಿ ಪರಧರ್ಮ ಸಹಿಷ್ಣುತೆಯು ಬೆಳೆದು ಬಂದಿತು.

ನಮ್ಮ ಸಂಸ್ಕೃತಿಯ ಬಗ್ಗೆ ಕೆಲವು ಪಾಶ್ಚಾತ್ಯರು ಈ ರೀತಿಯಾಗಿ ನುಡಿದಿರುವರು. "ಭಾರತೀಯರು ಯಾವಾಗಲೂ ಪರಲೋಕದ ವಿಚಾರವನ್ನು ಮಾಡುವರು. ಈ ಲೋಕದ ಬಗ್ಗೆ ಅವರಿಗೆ ಆಸ್ಥೆ ಕಡಿಮೆ". ಈ ಮಾತು ಪೂರ್ಣ ಸತ್ಯವಲ್ಲ. ನಮ್ಮ ಸಂಸ್ಕೃತಿಯು ಆಧ್ಯಾತ್ಮ ಪ್ರಧಾನವಾದುದು ಎಂಬ ಮಾತು ನಿಜ. ಅಶೋಕ, ಸಮುದ್ರಗುಪ್ತ, ಹರ್ಷವರ್ಧನ ಎರಡನೇ ಪುಲಿಕೇಶಿ ಮೊದಲಾದವರು ಪರಾಕ್ರಮದಲ್ಲಿ ಯಾರಿಗೆ ಕಡಿಮೆ ಇದ್ದರು ? ಇವರು ಮಹಾ ಪರಾಕ್ರಮಿಗಳೂ, ಸತ

ಸಂಧರೂ, ಧರ್ಮದಿಂದ ನಡೆಯುವವರೂ ಆಗಿದ್ದರು. ಇತಿಹಾಸ ಲೇಖಕನಾದ ಎಚ್. ಜಿ. ವೆಲ್ಸನು ಅಶೋಕನನ್ನು ಮುಕ್ತಕಂಠದಿಂದ ಹೊಗಳಿರುವನು.

ಭಾರತೀಯರ ಆದರ್ಶ ನಾಯಕರಾದರೂ ಯಾರು? ರಾಮ, ಕೃಷ್ಣ, ಭೀಷ್ಮ, ಧರ್ಮರಾಜ, ಹರಿಶ್ಚಂದ್ರ, ಕರ್ಣ, ವಿದುರ, ಇವರೆಲ್ಲರೂ ಮಹಾ ಮಾನವರು. ಹರಿಶ್ಚಂದ್ರನಂತಹ ಸತ್ಯಸಂಧನು, ಕರ್ಣನಂಥಹ ದಾನಿಯು ಜಗತ್ತಿನ ಇತಿಹಾಸದಲ್ಲಿ ನಮಗೆ ವಿರಳವಾಗಿ ದೊರೆಯುವರು.

ಪ್ರಾಚೀನ ಭಾರತದಲ್ಲಿಯ ಶಿಕ್ಷಣವು ನಮ್ಮ ಸಂಸ್ಕೃತಿ, ಆದರ್ಶಗಳಿಗೆ ಅನುಗುಣವಾಗಿತ್ತು. ಎಲ್ಲ ಕಡೆಗೆ ದಟ್ಟವಾದ ಅರಣ್ಯವಿದ್ದುದರಿಂದ ಅವರ ಜೀವನವು ನಿಸರ್ಗಕ್ಕೆ ಹೊಂದುವಂತೆ ಇತ್ತು. ಅವರ ಜೀವನವು ಶಾಂತಿ, ಸಂತುಷ್ಟಿಗಳಿಂದ ಕೂಡಿತ್ತು. ಅವರಿಗೆ ಪಟ್ಟಣಗಳ ಮೋಹವಿರಲಿಲ್ಲ. ಪ್ರಾಚೀನ ಕಾಲದ ಭಾರತೀಯರು ಕೇವಲ ಐಹಿಕ ಭೋಗಗಳಿಗೆ ಮಹತ್ವ ಕೊಟ್ಟವರಲ್ಲ, ನಮ್ಮಲ್ಲಿ ಅನೇಕ ರಾಜರು ಆಗಿಹೋಗಿರುವರು. ಆದರೆ ನಾವು ರಾಜರಿಗಿಂತಲೂ ಋಷಿಗಳಿಗೆ, ಕವಿಗಳಿಗೆ, ಧರ್ಮ ಸುಧಾರಕರಿಗೆ ಹೆಚ್ಚಿನ ಮಹತ್ವ ಕೊಟ್ಟಿರುವೆವು. ನಮ್ಮ ಪೂರ್ವಜರು ನಾಲ್ಕು ಪುರುಷಾರ್ಥಗಳನ್ನು ಹೇಳಿರುವರು. ಅದರಲ್ಲಿ ಮೊದಲನೆಯದೇ ಧರ್ಮ. ಧರ್ಮ, ಅರ್ಥ, ಕಾಮ, ಮೋಕ್ಷ— ಇವೇ ನಾಲ್ಕು ಪುರುಷಾರ್ಥಗಳು. ಹಣವನ್ನು ಗಳಿಸುವದು ತಪ್ಪಲ್ಲ. ಆದರೆ ಅದನ್ನು ಧರ್ಮ ಮಾರ್ಗದಿಂದ ಗಳಿಸಬೇಕು.

ಜೀವನದಲ್ಲಿ ಅರ್ಥವು ಪ್ರಧಾನವಾದದ್ದೆ. ಆದರೆ ಅದೇ ಸರ್ವಸ್ವವಲ್ಲ. ಧರ್ಮವೆಂದರೆ ಋಜು ಮಾರ್ಗದಲ್ಲಿ ನಡೆಯುವದು. ನಮ್ಮ ಧರ್ಮ ಗ್ರಂಥಗಳು 'ಸತ್ಯಂ ವದ, ಧರ್ಮಂ ಚರ' ಎಂದು ಬೋಧಿಸುವವು. ನಮ್ಮ ಸಾಹಿತ್ಯವೆಲ್ಲವೂ ಧರ್ಮ ಪ್ರಧಾನವಾದುದು. ಶಿಲ್ಪಕಲೆ, ಸಂಗೀತಗಳಲ್ಲಿಯೂ ಧರ್ಮದ ಪ್ರಭಾವವನ್ನು ಕಾಣಬಹುದು.

ಪ್ರಾಚೀನ ಭಾರತೀಯರ ವಿದ್ಯೆಯ ಗುರಿಯು ಕೇವಲ ಜ್ಞಾನವನ್ನು ಗಳಿಸುವದಲ್ಲ ಮೋಕ್ಷವೇ ಅವರ ಪರಮ ಗುರಿಯಾಗಿತ್ತು. ಆಗಿನ ಕಾಲದಲ್ಲಿ ಧರ್ಮವೇ ಜೀವನದ ಎಲ್ಲ ರಂಗಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿತ್ತು. ಆದ್ದರಿಂದ ಸ್ವಾಭಾವಿಕವಾಗಿಯೇ ಶಿಕ್ಷಣದಲ್ಲಿ ಧರ್ಮವು ಪ್ರಮುಖ ಸ್ಥಾನ ಪಡೆಯಿತು. ಅವರ ಗುರಿಗಳನ್ನು ಇಂದು ನಾವು ಒಪ್ಪಲಿಕ್ಕಿಲ್ಲ. ಆದರೆ ಅವರ ನಿಷ್ಠೆಯ ಬಗ್ಗೆ ಯಾರೂ ಸಂಶಯಪಡಲಾರರು.

ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳಿದ್ದವು. ಆರಂಭದಲ್ಲಿ ಇವು ಬೇರೆ ಬೇರೆ ಉದ್ಯೋಗ ಮಾಡುವದರಿಂದ ಬಂದವುಗಳು. ಜನ್ಮದಿಂದಲ್ಲ. ಜನ್ಮದಿಂದ ಯಾವನೂ ಬ್ರಾಹ್ಮಣನಾಗುತ್ತಿರಲಿಲ್ಲ. ಅದಕ್ಕಾಗಿಯೇ 'ಸಂಸ್ಕಾರಾತ್ ದ್ವಿಜ ಉಚ್ಯತೆ' ಎಂದು ಹೇಳಲಾಗಿರುವದು. ಕಾಲಾಂತರದಲ್ಲಿ ವರ್ಣಗಳೇ ಜಾತಿಗಳಾದವು. ಆಗ ತಮಗೆ ಇಷ್ಟ ಬಂದ ವಿದ್ಯೆಗಳನ್ನು ಬೇಕಾದವರು ಕಲಿಯಬಹುದಾಗಿತ್ತು. ಜನಕ ಮಹಾರಾಜನು ಕ್ಷತ್ರಿಯನಾದರೂ ಬ್ರಹ್ಮಜ್ಞಾನಿಯಾಗಿ

ದ್ದನು. ಅವರು ಯಾವದೊಂದು ಉದ್ಯೋಗದ ಸಲುವಾಗಿ ಜ್ಞಾನವನ್ನು ಗಳಿಸುತ್ತಿರಲಿಲ್ಲ. ಅವರು ನಿಜವಾಗಿಯೂ ಜಿಜ್ಞಾಸುಗಳು. ಅವರ ಉದ್ದೇಶ ನಿಜವಾದ ಜ್ಞಾನವನ್ನು ಪಡೆಯುವದು. ಪ್ರಾಚೀನ ಭಾರತದ ಋಷಿಗಳು ನಿಜವಾಗಿಯೂ ಜ್ಞಾನಪೋಷಕರಾಗಿದ್ದರು. ಅವರಿಗೆ ಧನಮೋಹವಾಗಲಿ ಅಧಿಕಾರ ಮೋಹವಾಗಲಿ ಇರಲಿಲ್ಲ. ಅವರು ನಿಷ್ಕಾಮ ಕರ್ಮಯೋಗಿಗಳು.

ಕೇವಲ ಜ್ಞಾನವನ್ನು ಗಳಿಸಿದರೆ ಸಾಲದು. ಕೇವಲ ಜ್ಞಾನಿಯಾದವನನ್ನು, ವೇದಗಳನ್ನು ಬೆನ್ನ ಮೇಲೆ ಹೊತ್ತುಕೊಂಡ ಕತ್ತೆಗೆ ನಮ್ಮ ಭಾರತೀಯರು ಹೋಲಿಸಿರುವರು. ನಮ್ಮ ವಿದ್ಯಾಭ್ಯಾಸದ ಗುರಿಯು ಕೇವಲ ಸ್ವಾರ್ಥ ಸಾಧನೆಯಾಗಿರಬಾರದು. ನಮ್ಮ ಪೂರ್ವಜರು 'ಪರೋಪಕಾರಾಯ ಮಿದಂ ಶರೀರಂ' ಎಂದು ಸಾರಿರುವರು. ಆದ್ದರಿಂದ ಪ್ರತಿಯೊಬ್ಬ ಮಾನವನು ತನ್ನಿಂದ ಸಾಧ್ಯವಾದಷ್ಟು ಸಮಾಜ ಕಾರ್ಯವನ್ನು ಮಾಡಬೇಕು. ನಮ್ಮ ಜ್ಞಾನದಿಂದ ನಮ್ಮ ಸಮಾಜಕ್ಕೆ ಏನೂ ಉಪಯೋಗವಿಲ್ಲದಿದ್ದರೆ ಅದರಿಂದ ಏನು ಪ್ರಯೋಜನ? ಋಷಿಗಳು ಸಮಾಜದ ಕಲ್ಯಾಣಕ್ಕಾಗಿಯೇ ತಮ್ಮ ಜೀವನವನ್ನು ಮೀಸಲಾಗಿ ಇಟ್ಟಿದ್ದರು. ಅದಕ್ಕಾಗಿಯೇ ಅಂದು ಸಮಾಜವು ಪ್ರಗತಿ ಪಥದಲ್ಲಿ ಮುಂದುವರಿಯಲು ಸಹಾಯವಾಯಿತು. ಈ ಋಷಿಗಳು ಎಲ್ಲ ಮಾನವರ ಹಿತವನ್ನು ಬಯಸತಕ್ಕವರು. ಅವರಲ್ಲಿ ಸಂಕುಚಿತ ಬುದ್ಧಿಗೆ ಅವಕಾಶವೇ ಇರಲಿಲ್ಲ. ಈ ಜಗತ್ತೇ ಒಂದು ಕುಟುಂಬ ಎಂದು ಅವರು ತಿಳಿದಿದ್ದರು. ಇಂಥವರಿಗೆ ಸಂಕುಚಿತ ಬುದ್ಧಿಯು ಎಲ್ಲಿಂದ ಬರಬೇಕು?

ಬಾಣಭಟ್ಟನ ಕಾದಂಬರಿಯಲ್ಲಿ ಜಾಬಾಲಿ ಋಷಿಗಳ ಆಶ್ರಮದ ವರ್ಣನೆಯು ಬಹಳ ಮನೋಹರವಾಗಿ ಬಂದಿರುವದು. ಅಲ್ಲಿ ಇರತಕ್ಕ ಹಿಂಸ್ರ ಪಶುಗಳು ಕೂಡ ತಮ್ಮ ಸ್ವಾಭಾವಿಕವಾದ ವೈರಭಾವವನ್ನು ಬಿಟ್ಟು ವಾಸಿಸುತ್ತಿದ್ದವು ಎಂದು ವರ್ಣಿಸಲಾಗಿದೆ. ಇದರಲ್ಲಿ ಅತಿಶಯೋಕ್ತಿಯಿದ್ದರೂ ಆಶ್ರಮದ ವಾತಾವರಣವು ಯಾವ ರೀತಿಯಾಗಿತ್ತು ಎಂಬುದಕ್ಕೆ ಇದು ಕನ್ನಡಿ ಹಿಡಿದಂತೆ ಇರುವದು. ವಾತಾವರಣದ ಪರಿಣಾಮವು ಮನುಷ್ಯನ ಮೇಲೆ ಆಗುತ್ತದೆಂದು ಆಧುನಿಕ ಮಾನಸಶಾಸ್ತ್ರಜ್ಞರು ಒಪ್ಪಿಕೊಂಡಿದ್ದಾರೆ. ಈ ಆಶ್ರಮಗಳು ಪಟ್ಟಣದ ಮಲಿನ ವಾತಾವರಣದಿಂದ ದೂರದಲ್ಲಿ ಇರುತ್ತಿದ್ದವು. ಸೃಷ್ಟಿದೇವಿಯ ಮಡಿಲಲ್ಲಿ ಅವರು ಬೆಳೆಯುತ್ತಿದ್ದರು. ಇಂಥ ಆಶ್ರಮಗಳಿಗೆ ಪ್ರಾಚೀನ ಕಾಲದಲ್ಲಿ ಕೊರತೆ ಇರಲಿಲ್ಲ, ಈ ಆಶ್ರಮಗಳ ವಾತಾವರಣವು ಮನುಷ್ಯನಿಗೆ ನೆಮ್ಮದಿ, ಶಾಂತಿಯನ್ನು ಕೊಡುತ್ತಿತ್ತು. ಆತ್ಮ ಸಂಯಮನ ಮಾಡಲು ಈ ವಾತಾವರಣವು ಸಹಾಯಕಾರಿಯಾಗಿತ್ತು. ಆದ್ದರಿಂದಲೇ ಋಷಿಗಳು ತಪೋವನಗಳಲ್ಲಿ ವಾಸಮಾಡುತ್ತಿದ್ದರು.

ರಾಮಾಯಣ ಮಹಾಭಾರತಗಳಲ್ಲಿ ಅನೇಕ ಆಶ್ರಮಗಳ ವರ್ಣನೆಯನ್ನು ಕಾಣಬಹುದು. ಕಣ್ವ ಋಷಿಯ ಆಶ್ರಮವು ವಿದ್ಯೆಯ ಕೇಂದ್ರವಾಗಿತ್ತು. ಕಣ್ವರ ಆಶ್ರಮದಲ್ಲಿ ಅನೇಕ ಚಿಕ್ಕ ಆಶ್ರಮಗಳಿದ್ದವು. ಈ ಆಶ್ರಮಗಳಲ್ಲಿ ಯಾವಾಗಲೂ ಬ್ರಾಹ್ಮಣರು ಯಜ್ಞಯಾಗಾದಿಗಳನ್ನು ಮಾಡುವದರಲ್ಲಿಯೂ, ಮಂತ್ರಗಳನ್ನು ಅನ್ನುವದರಲ್ಲಿಯೂ ತೊಡಗಿರುತ್ತಿದ್ದರು. ವೇದ

ಘೋಷಗಳಿಂದ ಅರಣ್ಯವು ನಿನಾದಿಸುತ್ತಿತ್ತು. ವಿದ್ಯಾರ್ಥಿಗಳು ಬೇರೆ ಬೇರೆ ವಿಷಯಗಳನ್ನು ಅಭ್ಯಾಸ ಮಾಡುತ್ತಿದ್ದರು. ಆಗಿನ ಕಾಲದಲ್ಲಿ ಪ್ರಚಲಿತವಿದ್ದ ಎಲ್ಲ ವಿಷಯಗಳನ್ನು ಇಲ್ಲಿ ಕಲಿಸಲಾಗುತ್ತಿತ್ತು. ಬೇರೆ ಬೇರ ವೇದಗಳಲ್ಲಿ ಪಾರಂಗತರಾದವರು ಇಲ್ಲಿ ಇದ್ದರು. ನ್ಯಾಯ, ವೇದಾಂತ, ವಿಜ್ಞಾನಗಳಲ್ಲಿ ಪಂಡಿತರಾದವರು ಪಾಠ ಹೇಳುತ್ತಿದ್ದರು. ಕಣ್ವ ಋಷಿಯ ಆಶ್ರಮವೆಂದರೆ ಆಗಿನ ಕಾಲದ ವಿಶ್ವವಿದ್ಯಾಲಯವಾಗಿತ್ತು. ಕಾಳಿದಾಸನು ಕಣ್ವ ಋಷಿಯ ಆಶ್ರಮದ ವರ್ಣನೆಯನ್ನು ಬಹು ಸುಂದರವಾಗಿ ಮಾಡಿರುವನು. ದುಷ್ಯಂತನು ಕಣ್ವ ಋಷಿಯ ಆಶ್ರಮದ ಸಮೀಪಕ್ಕೆ ಬಂದ ಕೂಡಲೆ ಭಯ ಭಕ್ತಿಯಿಂದ ಅವರನ್ನು ಸ್ಮರಿಸುವನು.

ವ್ಯಾಸ ಮಹರ್ಷಿಯ ಆಶ್ರಮವು ಬಹಳ ಪ್ರಸಿದ್ಧವಾದದ್ದು. ವ್ಯಾಸರು ಅಪರೋಕ್ಷ ಜ್ಞಾನಿಗಳೆಂದು ಹೆಸರಾಗಿರುವರು. ಅವರು ತಮ್ಮ ಶಿಷ್ಯರಿಗೆ ವೇದ ವಿದ್ಯೆಯನ್ನು ಹೇಳಿ ಕೊಡುತ್ತಿದ್ದರು. ವ್ಯಾಸರ ಶಿಷ್ಯರಾದ ವೈಶಂಪಾಯನ,ಜೈಮಿನಿ, ಶುಕ ಮೊದಲಾದವರು ಪ್ರಸಿದ್ಧ ವಿದ್ವಾಂಸರಾಗಿದ್ದರು.

ವಶಿಷ್ಟ ಮತ್ತು ವಿಶ್ವಾಮಿತ್ರರ ಆಶ್ರಮಗಳೂ ಮಹಾಭಾರತದಲ್ಲಿ ಉಲ್ಲೇಖಿಸಲ್ಪಟ್ಟಿರುವವು. ಈ ಆಶ್ರಮಗಳು ಕಾಮ್ಯಕ ವನದಲ್ಲಿ ಸರಸ್ವತೀ ನದಿಯ ದಂಡೆಯ ಮೇಲೆ ಇದ್ದವು. ಕುರುಕ್ಷೇತ್ರದ ಹತ್ತಿರ ಇರುವ ಆಶ್ರಮದಲ್ಲಿ ಇಬ್ಬರು ಸ್ತ್ರೀಯರು ಅಧ್ಯಯನದಲ್ಲಿ ನಿರತರಾಗಿದ್ದರು. ಒಬ್ಬಳು ಶಾಂಡಿಲ್ಯ ದೊರೆಯ ಮಗಳು. ಅವಳು ತಪಸ್ಸನ್ನು ಮಾಡಿ ಸಿದ್ಧಿಯನ್ನು ಪಡೆದಳು.

ಸ್ತ್ರಿಯರೂ ಕೂಡ ಅಖಂಡ ಬ್ರಹ್ಮಚಾರಿಗಳಾಗಿ ಜ್ಞಾನ ಯಜ್ಞ ದಲ್ಲಿ ಭಾಗವಹಿಸುವದನ್ನು ನಾವು ಉಪನಿಷತ್ತಿನಲ್ಲಿ ಕಾಣುವೆವು. ಉಪನಿಷತ್ತಿನಲ್ಲಿ ಗಾರ್ಗಿಯು ಪತಿಯ ಸಂಗಡ ತತ್ತ್ವಜ್ಞಾನದ ವಿಷಯದಲ್ಲಿ ಚರ್ಚೆಮಾಡುವಳು. ಯಜ್ಞಯಾಗಾದಿಗಳ ಸಂದರ್ಭದಲ್ಲಿ ಅನೇಕ ವಿದ್ವಾಂಸರು ಒಂದು ಕಡೆಗೆ ಬರುತ್ತಿದ್ದರು. ಆಗ ವಿದ್ವಾಂಸರಲ್ಲಿ ಚರ್ಚೆಗಳು ನಡೆಯುತ್ತಿದ್ದವು. ಪ್ರಾಚೀನ ಕಾಲದಲ್ಲಿ ರಾಜರು ಯಜ್ಞಗಳನ್ನು ಮಾಡುತ್ತಿದ್ದರು. ಆ ಸಂದರ್ಭದಲ್ಲಿ ಪಂಡಿತರಿಗೆ ಒಟ್ಟುಗೂಡಲು ಸಂಧಿಯು ದೊರೆ ಯುತ್ತಿತ್ತು. ಯಜ್ಞಗಳೆಂದರೆ ಜ್ಞಾನವನ್ನು ಬಿತ್ತರಿಸುವ ಕೇಂದ್ರ ಗಳಾಗಿದ್ದವು. ಜನಕ ಮಹಾರಾಜನು ರಾಜಋಷಿಯಾಗಿದ್ದನು. ಅವನು ಸ್ವತಃ ಜ್ಞಾನಿಯಾಗಿದ್ದುದಲ್ಲದೆ ವಿದ್ಯಾ ಪಕ್ಷಪಾತಿಯಾಗಿ ದ್ದನು. ಅವನು ಮಾಡಿದ ಯಜ್ಞದಲ್ಲಿ ನೂರಾರು ವಿದ್ವಾಂಸರು ಬಂದಿದ್ದರೆಂದು ಮಹಾಭಾರತದಲ್ಲಿ ಹೇಳಲಾಗಿದೆ. ಉಪನಿಷತ್ತಿ ನಲ್ಲಿಯೂ ಜನಕನು ಮಹಾಜ್ಞಾನಿಯೆಂದು ಹೇಳಲಾಗಿದೆ. ಇಂಥ ಅನೇಕ ಋಷಿಗಳಿಂದಲೇ ಆ ಕಾಲದಲ್ಲಿ ಜ್ಞಾನವು ಪಸರಿಸ ಲ್ಪಡುತ್ತಿತ್ತು.

ಮನುಷ್ಯನ ಜೀವನದಲ್ಲಿ ನಾಲ್ಕು ಭಾಗಗಳನ್ನು ಮಾಡಿ ದ್ದರು. ಇವುಗಳಿಗೆ ಆಶ್ರಮಗಳೆಂದು ಹೆಸರು. ಮೊದಲಿನ ೨೫ ವರ್ಷಗಳ ವರೆಗೆ ಬ್ರಹ್ಮಚರ್ಯಾಶ್ರಮ. ಆಗ ವಿದ್ಯಾಭ್ಯಾಸ ಮಾಡುವದು ಅವನ ಗುರಿ. ೨೫ ರಿಂದ ೫೦ ವರ್ಷಗಳವರೆಗೆ ಗೃಹಸ್ಥಾಶ್ರಮ. ಈ ಅವಧಿಯಲ್ಲಿ ಮದುವೆ ಮಾಡಿಕೊಂಡು ಗೃಹಸ್ಥನಾಗಿ ಬಾಳುವೆ ಮಾಡಬೇಕು. ಮೂರನೇ ಆಶ್ರಮ

ವೇಂದರೆ ವಾನಪ್ರಸ್ಥ ಆಶ್ರಮ. ೫೦ ರಿಂದ ೭೫ ವಯಸ್ಸಿನವರೆಗೆ ಸಂಸಾರವನ್ನು ತ್ಯಾಗಮಾಡಿ ಅರಣ್ಯದಲ್ಲಿ ತಪಸ್ಸನ್ನು ಆಚರಿಸುತ್ತ ಕಾಲಕಳೆಯಬೇಕು. ಕೊನೆಯ ಆಶ್ರಮವೇಂದರೆ ಸಂನ್ಯಾಸ. ೭೫ ರಿಂದ ೧೦೦ ವರ್ಷದವರೆಗೆ ಸರ್ವಸ್ವವನ್ನು ತ್ಯಾಗಮಾಡಿ ಪರಮಾತ್ಮನ ಚಿಂತನೆಯಲ್ಲಿ ಕಾಲ ಕಳೆಯಬೇಕು. ಅವರು ದೀರ್ಘಾಯುಷಿಗಳಾಗಿದ್ದರು. ಆದ್ದರಿಂದಲೇ ಈ ರೀತಿಯಾಗಿ ಕಾಲವನ್ನು ಬೇರೆ ಬೇರೆ ಆಶ್ರಮಗಳಿಗೆ ನಿಗದಿಪಡಿಸಿದ್ದರು.

ಮನುಷ್ಯನಾಗಿ ಹುಟ್ಟಿ ಬಂದವನು ಮೂರು ಋಣಗಳನ್ನು ತೀರಿಸಬೇಕಾಗಿತ್ತು. ದೇವ ಋಣ, ಪಿತೃಋಣ ಮತ್ತು ಋಷಿ ಋಣಗಳನ್ನು ತೀರಿಸುವದು ಪ್ರತಿಯೊಬ್ಬನ ಕರ್ತವ್ಯವಾಗಿತ್ತು. ಯಜ್ಞಯಾಗಾದಿಗಳನ್ನು ಮಾಡುವದರಿಂದ ದೇವ ಋಣವನ್ನು ತೀರಿಸುತ್ತಿದ್ದರು. ಸಂತತಿಯನ್ನು ಪಡೆಯುವದರಿಂದ ಪಿತೃ ಋಣವನ್ನೂ, ವೇದಾಧ್ಯಯನದಿಂದ ಋಷಿ ಋಣವನ್ನೂ ತೀರಿಸುತ್ತಿದ್ದರು. .ಒಂದೊಂದು ವೇದವನ್ನು ಅಭ್ಯಾಸಮಾಡಬೇಕಾದರೆ ಹನ್ನೆರಡು ವರ್ಷಗಳು ಹಿಡಿಯುತ್ತಿದ್ದವು. ಕೆಲವರು ಅಖಂಡ ಬ್ರಹ್ಮಚಾರಿಗಳಾಗಿ ಮೂರು ವೇದಗಳನ್ನು ಅಭ್ಯಾಸ ಮಾಡುತ್ತಿದ್ದರು. ಆಗಿನ ಕಾಲದಲ್ಲಿ ಮುದ್ರಣಾಲಯಗಳಿರಲಿಲ್ಲವಾದ್ದರಿಂದ ಆಗ ಪುಸ್ತಕಗಳು ಲಭ್ಯವಿರಲಿಲ್ಲ. ಮೊದಲು ಕಲಿಯಬೇಕಾದ ವಿಷಯವನ್ನು ಬರೆದುಕೊಳ್ಳಬೇಕಾಗುತ್ತಿತ್ತು. ಇಲ್ಲವೆ ಅದನ್ನು ಸ್ಮರಣೆಯಲ್ಲಿ ಇಟ್ಟುಕೊಳ್ಳಬೇಕಾಗುತ್ತಿತ್ತು. ಅವರು ಧಾರ್ಮಿಕ ಗ್ರಂಥಗಳನ್ನು ಅಭ್ಯಾಸಮಾಡುವದರಲ್ಲಿಯೂ, ಅವುಗಳನ್ನು ಪೂರ್ಣವಾಗಿ ಸ್ಮರಣೆಯಲ್ಲಿ ಇಡುವದರಲ್ಲಿಯೂ

ತಮ್ಮ ಕಾಲವನ್ನು ಕಳೆಯುತ್ತಿದ್ದರು. ಅದೇ ಅವರ ಜೀವನ ಧ್ಯೇಯವಾಗಿತ್ತು. ನಮ್ಮ ವೇದಗಳು ಈ ರೀತಿಯಾಗಿಯೇ ಇಲ್ಲಿಯವರೆಗೆ ಬಂದಿರುವವು. ಭಾರತೀಯರ ಕಂಠಪಾಠ ಮಾಡುವ ಅದ್ಭುತವಾದ ಶಕ್ತಿಯನ್ನು ವಿದೇಶಿಯರೂ ಕೂಡ ಮುಕ್ತಕಂಠದಿಂದ ಸ್ತುತಿಸಿರುವರು. ಇಲ್ಲದಿದ್ದರೆ ನಮ್ಮ ಪುರಾತನ ಗ್ರಂಥಗಳು ನಮಗೆ ದೊರೆಯುತ್ತಿರಲಿಲ್ಲ.

# ವಿದ್ಯಾಕೇಂದ್ರಗಳು

ಪ್ರಾಚೀನ ಭಾರತದಲ್ಲಿ ವಿದ್ಯೆಯು ಸಾರ್ವತ್ರಿಕವಾಗಿರಲಿಲ್ಲ. ರಕಾರವು ಶಿಕ್ಷಣದ ಹೊಣೆಯನ್ನು ಹೊತ್ತಿರಲಿಲ್ಲ. ಶಿಕ್ಷಣ ಂಸ್ಥೆಗಳನ್ನು ನಡೆಸುವದು ಸಮಾಜದ ಹೊಣೆಗಾರಿಕೆಯಾಗಿತ್ತು. ಮಾಜವು ಶಿಕ್ಷಣದ ಬಗ್ಗೆ ಸಹಾನುಭೂತಿಯನ್ನು ಹೊಂದಿತ್ತು. ವ್ವರಿಂದಲೇ ಗುರುಕುಲಗಳು ಸರಕಾರದ ಸಹಾಯವಿಲ್ಲದೆ ನಡೆ ಯುತ್ತಿದ್ದವು. ಜನರ ಸಹಾಯವಿಲ್ಲದೆ ನಿಂತುಹೋದ ಆಶ್ರಮದ ಉದಾಹರಣೆಯು ಒಂದೂ ದೊರೆಯುವದಿಲ್ಲ. ಇದರ ೕಲಿಂದ ಆಗಿನ ಕಾಲದ ಜನರ ವಿದ್ಯಾಪ್ರೇಮವು ವ್ಯಕ್ತವಾಗುತ್ತಿದೆ. ಗುರುಕುಲಗಳೇ ಆಗಿನ ವಿದ್ಯಾಕೇಂದ್ರಗಳು. ವಿದ್ಯಾಕೇಂದ್ರಗಳನ್ನು ಋಷಿಗಳು ನಡೆಸುತ್ತಿದ್ದರು. ಈ ಷಿಗಳು ಅರಣ್ಯಗಳಲ್ಲಿ ಆಶ್ರಮಗಳನ್ನು ಕಟ್ಟಿಕೊಂಡು ವಿದ್ಯಾರ್ಥಿ ನ್ನು ಆಕರ್ಷಿಸುತ್ತಿದ್ದರು. ಸಾವಿರಾರು ಮೈಲುಗಳಿಂದ ದ್ಯಾರ್ಥಿಗಳು ಆಶ್ರಮಗಳನ್ನು ಹುಡುಕಿಕೊಂಡು ವಿದ್ಯೆ ಕಲಿಯು ದಕ್ಕಾಗಿ ಬರುತ್ತಿದ್ದರು. ಬೇರೆ ಬೇರೆ ಋಷಿಗಳು ಬೇರೆ ಬೇರೆ ಷಯಗಳಲ್ಲಿ ಪಾರಂಗತರಾಗಿರುತ್ತಿದ್ದರು. ತಮಗೆ ಇಷ್ಟಬಂದ ಷಯವನ್ನು ಕಲಿಯುವದಕ್ಕಾಗಿ ವಿದ್ಯಾರ್ಥಿಗಳು ಆ ವಿಷಯ ಲ್ಲಿ ನಿಷ್ಣಾತರಾದ ಋಷಿಗಳನ್ನು ಹುಡುಕಿಕೊಂಡು ಬೇರೆ ಬೇರೆ ರುಕುಲಗಳಿಗೆ ವಿದ್ಯಾಭ್ಯಾಸ ಮಾಡಲು ಹೋಗುತ್ತಿದ್ದರು. ಗುರುಕುಲಗಳಲ್ಲಿ ಶಿಷ್ಯನ ಯೋಗ್ಯತೆಯನ್ನು ಪರೀಕ್ಷಿಸಿ ಅವನಿಗೆ ವೇಶ ಕೊಡುತ್ತಿದ್ದರು.

ವಿದ್ಯಾಭ್ಯಾಸವು ತಂದೆಯಿಂದ ಮನೆಯಲ್ಲಿ ಪ್ರಾರಂಭವಾಗು
ತ್ತಿತ್ತು. ೮ ವರ್ಷಗಳಾದ ಮೇಲೆ ಉಪನಯನ ಮಾಡುತ್ತಿ
ದ್ದರು. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಲ್ಲಿ ಉಪನಯನ
ಮಾಡುವ ಪದ್ಧತಿ ಇತ್ತು. ಉಪನಯನ ಮಾಡದೆ ಯಾವನೂ
ವೇದಾಧ್ಯಯನ ಮಾಡುವದಕ್ಕೆ ಯೋಗ್ಯನಾಗುತ್ತಿರಲಿಲ್ಲ. ಉಪ
ನಯನವಾದ ಮೇಲೆ ಅವನನ್ನು ಗುರುಕುಲಕ್ಕೆ ಕಳಿಸುತ್ತಿದ್ದರು

ಸಾಮಾನ್ಯವಾಗಿ ಗುರುಕುಲಗಳು ಅರಣ್ಯಗಳಲ್ಲಿ ಇರುತ್ತಿ
ದ್ದವು. ವಿದ್ಯಾರ್ಥಿಗಳು ಕಷ್ಟಪಟ್ಟು ವಿದ್ಯೆಯನ್ನು ಸಂಪಾದಿ
ಬೇಕಾಗಿತ್ತು. ವಿದ್ಯಾಭ್ಯಾಸ ಮಾಡುವಾಗ ಅವರು ಸಾದ
ಜೀವನವನ್ನು ನಡೆಸಬೇಕಾಗುತ್ತಿತ್ತು. ಬ್ರಹ್ಮಚರ್ಯಪಾಲನೆಯ
ಅವಶ್ಯವಾಗಿತ್ತು. ಅವರು ಯಾವದೇ ಪ್ರಕಾರದ ವಿಲಾಸ
ವಸ್ತುಗಳನ್ನು ಉಪಯೋಗ ಮಾಡುವಂತಿಲ್ಲ. ಅವರು ಹ
ಕೊಳ್ಳುವ ಬಟ್ಟೆಗಳೂ ಸಾದಾ ರೀತಿಯವಾಗಿದ್ದವು. ವ
ಸುಗಂಧ ತೈಲಗಳನ್ನು ಹಚ್ಚಿಕೊಳ್ಳುವಂತಿಲ್ಲ. ಆಶ್ರಮ
ನಿಯಮಗಳಿಗೆ ವಿರುದ್ಧವಾಗಿ ನಡೆಯುವಂತಿಲ್ಲ. ಮುಂಜ
ಬೇಗನೆ ಎದ್ದು ನದಿಯಲ್ಲಿ ಅಥವಾ ಹೊಂಡದಲ್ಲಿ ಸ್ನಾನ
ಬೇಕಾಗುತ್ತಿತ್ತು. ಆಶ್ರಮಗಳು. ಬಹುತರವಾಗಿ ನದ
ಅಥವಾ ಸರೋವರದ ದಂಡೆಯ ಮೇಲೆ ಇರುತ್ತಿದ್ದವು.
ಗಾಲದಲ್ಲಿಯೂ, ಮಳೆಗಾಲದಲ್ಲಿಯೂ ತಣ್ಣೀರಿನಿಂದ
ಮಾಡಬೇಕಾಗುತ್ತಿತ್ತು. ಗುರುಗಳು ಏಳುವದಕ್ಕಿಂತ
ಮೊದಲು ಏಳಬೇಕೆಂಬ ನಿಯಮವಿತ್ತು. ಹಗಲು ಹೊ
ಮಲಗಿಕೊಳ್ಳುವಂತಿಲ್ಲ. ಮುಂಜಾನೆ ಹಾಸಿಗೆಯಿಂದ

ಕೂಡಲೆ ಗುರುಗಳ ಪಾದಮುಟ್ಟಿ ನಮಸ್ಕರಿಸಬೇಕು. ಗುರುವಿನ ವಿಷಯದಲ್ಲಿ ಪೂಜ್ಯ ಭಾವನೆಯನ್ನು ಹೊಂದಿರಬೇಕು. ಯಾವದೇ ರೀತಿಯಿಂದ ಗುರುವಿನ ನಿಂದೆಯನ್ನು ಮಾಡಬಾರದು. ಗುರುಗಳಲ್ಲಿ ದೋಷಗಳಿದ್ದರೆ ಅವುಗಳನ್ನು ತೋರಿಸಬಾರದೆಂದೇನೂ ಅಲ್ಲ. ಅವುಗಳನ್ನು ಬಹಿರಂಗವಾಗಿ ಹೇಳತಕ್ಕದ್ದಲ್ಲ. ಒಂದು ವೇಳೆ ಗುರುವು ಧರ್ಮವನ್ನು ಬಿಟ್ಟು ನಡೆಯ ಹತ್ತಿದರೆ ಶಿಷ್ಯನು ಅವನಿಗೆ ವಿಧೇಯನಾಗಿರಬೇಕಾಗಿಲ್ಲ.

ಗುರುಕುಲಗಳಲ್ಲಿಯೂ ಬೌದ್ಧರ ವಿಹಾರಗಳಲ್ಲಿಯೂ ಶಿಷ್ಯನು ಗುರುಗಳ ಸೇವೆಯನ್ನು ಅತ್ಯಂತ ನಿಷ್ಠೆಯಿಂದ ಮಾಡುತ್ತಿದ್ದನು. ನೀರು ತರುವದು, ಗುರುಗಳ ಆಸನವನ್ನು ತೆಗೆದುಕೊಂಡು ಬರುವದು, ಪ್ರಸಂಗ ಬಂದಾಗ ಬಟ್ಟೆಗಳನ್ನು ಒಗೆಯುವದು, ಆಶ್ರಮದಲ್ಲಿಯ ಪಾತ್ರೆಗಳನ್ನು ಸ್ವಚ್ಛಮಾಡುವದು ಅವನ ಕೆಲಸಗಳಾಗಿದ್ದವು. ಈ ಕೆಲಸ ಮಾಡುವದಕ್ಕೆ ಶಿಷ್ಯರು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಆದರೂ ಗುರುಗಳು ಶಿಷ್ಯರಿಂದ ಅವಶ್ಯವಿದ್ದಷ್ಟು ಕೆಲಸಗಳನ್ನು ಮಾತ್ರ ಮಾಡಿಸಿಕೊಳ್ಳುತ್ತಿದ್ದರು. ಶ್ರೀ ಕೃಷ್ಣನಂಥ ಜನರು ಕೂಡ ಗುರುಗಳ ಸೇವೆಯನ್ನು ಮಾಡುವದು ತಮ್ಮ ಭಾಗ್ಯವೆಂದು ತಿಳಿದಿದ್ದರು. ಗುರುಗಳ ಸೇವೆಯನ್ನು ಮಾಡದೆ ವಿದ್ಯೆಯು ಬರಲಾರದೆಂದು ಅವರು ತಿಳಿದಿದ್ದರು. ರಾಜಕುಮಾರರು ಕೂಡ ಸ್ವ ಇಚ್ಛೆಯಿಂದ ಗುರುಗಳ ಸೇವೆಯನ್ನು ಮಾಡುತ್ತಿದ್ದರು. ಆ ರೀತಿ ಕೆಲಸಮಾಡುವದರಲ್ಲಿ ಅವರಿಗೆ ಅಭಿಮಾನವೆನಿಸುತ್ತಿತ್ತು. ಆದರೆ ಯಾವದೇ ಗುರುವು ವಿದ್ಯೆಯನ್ನು ಹೇಳದೆ ಕೇವಲ ಅವರ ಕಡೆಯಿಂದ ಕೆಲಸಮಾಡಿಸಿ

ಕೊಳ್ಳುವ ಪದ್ಧತಿಯು ರೂಢಿಯಲ್ಲಿ ಇರಲಿಲ್ಲ. ವಿದ್ಯಾಭ್ಯಾಸಕ್ಕೆ ವ್ಯತ್ಯಯ ಬಾರದ ರೀತಿಯಲ್ಲಿ ಕೆಲಸವನ್ನು ಮಾಡಿಸಿಕೊಳ್ಳು ತ್ತಿದ್ದರು. ಬಡ ವಿದ್ಯಾರ್ಥಿಗಳು ಆಶ್ರಮಗಳಲ್ಲಿ ಕೆಲಸಮಾಡು ತ್ತಿದ್ದರು. ಶ್ರೀಮಂತರು ಇಂಥ ಕೆಲಸಗಳನ್ನು ಮಾಡುವ ಅವಶ್ಯ ಕತೆ ಇರಲಿಲ್ಲ. ಬಡ ವಿದ್ಯಾರ್ಥಿಗಳಿಗೆ ಆಶ್ರಮದಲ್ಲಿ ಪುಕ್ಕಟೆ ಯಾಗಿ ಊಟವು ದೊರೆಯುತ್ತಿತ್ತು. ಗುರುಗಳು ಅವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದರು. ಶ್ರೀಮಂತ ವಿದ್ಯಾರ್ಥಿಗಳು ಆಶ್ರಮದಲ್ಲಿಯ ಕೆಲಸಗಳನ್ನು ಸಾಂಕೇತಿಕವಾಗಿ ಮಾಡುತ್ತಿದ್ದರು. ತಕ್ಷಶಿಲಾ ವಿಶ್ವವಿದ್ಯಾಲಯದಲ್ಲಿ ವಾಸ ಮಾಡುತ್ತಿದ್ದ ಶ್ರೀಮಂತ ವಿದ್ಯಾರ್ಥಿಗಳು ಗುರುಗಳ ಮನೆಯಲ್ಲಿ ವಾಸಮಾಡುತ್ತಿದ್ದರೂ ಅವರು ಯಾವ ಕೆಲಸವನ್ನು ಮಾಡು ತ್ತಿರಲಿಲ್ಲ. ಅವರು ತಮ್ಮ ವೆಚ್ಚದ ಬಗ್ಗೆ ಗುರುಗಳಿಗೆ ಹಣ ವನ್ನು ಮುಂಗಡವಾಗಿ ಕೊಡುತ್ತಿದ್ದರು. ಬಡ ವಿದ್ಯಾರ್ಥಿ ಗಳು ಹಣವನ್ನು ಕೊಡುತ್ತಿರಲಿಲ್ಲವಾದ್ದರಿಂದ ಅವರು ಎಲ್ಲ ಕೆಲಸಗಳನ್ನು ಮಾಡಬೇಕಾಗುತ್ತಿತ್ತು. ಹಗಲು ಹೊತ್ತಿನಲ್ಲಿ ಬಡ ಹುಡುಗರು ಕೆಲಸಮಾಡುತ್ತಿದ್ದರು. ರಾತ್ರಿಯ ವೇಳೆಯಲ್ಲಿ ಈ ಬಡ ವಿದ್ಯಾರ್ಥಿಗಳಿಗೆ ಗುರುಗಳು ಪಾಠ ಹೇಳುತ್ತಿದ್ದರು. ಇದ ರಿಂದ ಎಲ್ಲರಿಗೂ ಕಲಿಯಲು ಅವಕಾಶ ದೊರೆಯುತ್ತಿತ್ತು. ನಾಲಂದಾ ವಿಶ್ವವಿದ್ಯಾಲಯದಲ್ಲಿಯೂ ಬಡ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದಲ್ಲಿ ಶಾರೀರಿಕ ಶ್ರಮದ ಕೆಲಸಗಳನ್ನು ಮಾಡ ಬೇಕಾಗುತ್ತಿತ್ತು. ಇದರಿಂದ ಅವರಿಗೆ ಪುಕ್ಕಟೆಯಾದ ಶಿಕ್ಷಣವು ದೊರೆಯುತ್ತಿತ್ತು. ಹೀಗಿದ್ದರೂ ಶಿಕ್ಷಕರು ಒತ್ತಾಯದಿಂದ ವಿದ್ಯಾರ್ಥಿಗಳಿಂದ ಸೇವೆಯನ್ನು ತೆಗೆದುಕೊಳ್ಳುತ್ತಿರಲಿಲ್ಲ.

ಆಶ್ರಮಗಳಿಗೆ ಸಾರ್ವಜನಿಕರು ಮತ್ತು ರಾಜರು ಸಹಾಯವನ್ನು ಮಾಡುತ್ತಿದ್ದರು. ಆದರೆ ಅದಕ್ಕೆ ನಿಯಮಗಳೇನೂ ಇರಲಿಲ್ಲ. ಋಷಿಗಳು ನಿಷ್ಕಾಮ ಕರ್ಮಮಾಡುತ್ತಿದ್ದರು. ಆ ಋಷಿಗಳು ಯಾರ ಬಳಿಯಲ್ಲಿಯೂ ಹಣವನ್ನು ಕೇಳಲು ಹೋಗುತ್ತಿರಲಿಲ್ಲ. ಅವರ ಸೇವೆಯನ್ನು ಸಮಾಜವು ಮರೆಯುತ್ತಿರಲಿಲ್ಲ. ಅವರಿಗೆ ಹಣದ ಕೊರತೆ ಉಂಟಾಗದಂತೆ ಸಮಾಜವು ನೋಡಿಕೊಳ್ಳುತ್ತಿತ್ತು. ಯಾವ ಕಡೆಯಿಂದಲಾದರೂ ಸಹಾಯವು ಬರುತ್ತಿತ್ತು. ಗುರುಕುಲಗಳನ್ನು ನಡೆಸುವದು ಒಂದು ವ್ಯಾಪಾರವಾಗಿರಲಿಲ್ಲ. ಅದು ತಮ್ಮ ಪಾಲಿನ ಕರ್ತವ್ಯವೆಂದು ಅವರು ಮಾಡುತ್ತಿದ್ದರು. ಆಶ್ರಮದಲ್ಲಿದ್ದ ಗುರುಗಳಿಗೆ ಯಾವ ತರದ ಸಂಬಳವು ಇರಲಿಲ್ಲ, ದೇಹದಲ್ಲಿ ಶಕ್ತಿಯಿರುವವರೆಗೆ ಅವರು ವಿದ್ಯಾದಾನ ಮಾಡುತ್ತಿದ್ದರು. ವಿದ್ಯಾದಾನ ಮಾಡುವದು ಪವಿತ್ರವಾದ ಕಾರ್ಯವೆಂದು ತಿಳಿದಿದ್ದರೇ ಹೊರತು ಅದೊಂದು ಹೊಟ್ಟೆ ಹೊರೆಯುವ ಉದ್ಯೋಗವೆಂದು ತಿಳಿದಿರಲಿಲ್ಲ, ಅದಕ್ಕಾಗಿಯೇ ಅವರಿಗೆ ಯಾವ ಕೊರತೆಯೂ ಆಗಲಿಲ್ಲ. ಶಿಕ್ಷಕರಾದವರು ತಮ್ಮ ಪಾಂಡಿತ್ಯ ಸದಾಚಾರಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತಿದ್ದರು. ಸಾವಿರಾರು ಮೈಲುಗಳನ್ನು ಸಂಚರಿಸಿ ವಿದ್ಯಾರ್ಥಿಗಳು ಆಶ್ರಮಗಳನ್ನು ಹುಡುಕಿಕೊಂಡು ಬರುತ್ತಿದ್ದರು ಎಂಬ ಬಗ್ಗೆ ಅನೇಕ ಉಲ್ಲೇಖಗಳು ದೊರೆಯುವವು. ಭವಭೂತಿಯ ಉತ್ತರ ರಾಮಚರಿತೆಯಲ್ಲಿ ಈ ಬಗ್ಗೆ ಉಲ್ಲೇಖವು ದೊರೆಯುವದು. ಅರಸು ಕುಮಾರರು ಕೂಡ ವಿದ್ಯಾಭ್ಯಾಸ ಮಾಡಲು ದೂರದ ಆಶ್ರಮಗಳಿಗೆ ಹೋಗುತ್ತಿದ್ದರು. ಆಶ್ರಮ

ದಲ್ಲಿದ್ದಾಗ ರಾಜಪುತ್ರರಿಗೂ ಬಡವಿದ್ಯಾರ್ಥಿಗಳಿಗೂ ಒಂದೇ ರೀತಿಯ ಶಿಕ್ಷಣವು ದೊರೆಯುತ್ತಿತ್ತು. ರಾಜಪುತ್ರರೆಂದು ಅವರಿಗೆ ಹೆಚ್ಚಿನ ಸವಲತ್ತುಗಳು ದೊರೆಯುತ್ತಿರಲಿಲ್ಲ.

ವಿದ್ಯಾಭ್ಯಾಸವು ಮುಗಿದ ಮೇಲೆಯೂ ವಿದ್ಯಾರ್ಥಿಗಳು ಗುರುಗಳ ಸಂಬಂಧವನ್ನು ಇಟ್ಟುಕೊಳ್ಳುತ್ತಿದ್ದರು. ವಿದ್ಯಾರ್ಥಿಯಾದವನು ನಿರಂತರವೂ ಅಧ್ಯಯನದಲ್ಲಿ ನಿರತನಾಗಿರಬೇಕಾದುದು ಅವಶ್ಯವಾಗಿತ್ತು. ಒಂದು ವೇಳೆ ಶಿಷ್ಯನು ತಾನು ಕಲಿತ ವಿಷಯವನ್ನು ಮರೆತಿದ್ದರೆ ಹಾಗೆ ಗುರುಗಳ ಮುಂದೆ ಹೇಳುತ್ತಿದ್ದನು. ಹಾಗೂ ತಾನು ಮತ್ತೆ ಆ ವಿಷಯವನ್ನು ಮರೆಯದೆ ಅಭ್ಯಾಸ ಮಾಡುವದಾಗಿ ಗುರುಗಳಿಗೆ ವಚನಕೊಡುತ್ತಿದ್ದನು. ವಿದ್ಯಾಭ್ಯಾಸವು ಮುಗಿದ ಮೇಲೆ ಶಿಷ್ಯನಿಗೆ ಮಾಡುವ ಉಪದೇಶಗಳಲ್ಲಿ ಗುರುವು ನಮ್ಮ ನಿಮ್ಮ ಸಂಬಂಧವು ವಂಶಪರಂಪರೆಯಾಗಿ ಮುಂದುವರಿಯಲಿ ಎಂದು ಹೇಳುತ್ತಿದ್ದನು. ಹಾಗೆ ಮುಂದುವರಿದ ಉದಾಹರಣೆಯೆಂದರೆ ವಶಿಷ್ಠ ಋಷಿ. ಇವನು ದಶರಥನಿಗೂ, ರಾಮನಿಗೂ ಗುರುವಾಗಿದ್ದನು. ಶಿಷ್ಯನು ತನ್ನ ಊರಿಗೆ ಬಂದ ಮೇಲೆ ಕೂಡ ಗುರುವು ಶಿಷ್ಯನ ಮನೆಗೆ ಬಂದು ತನ್ನ ವಿದ್ಯಾರ್ಥಿಯು ಅಧ್ಯಯನದಲ್ಲಿ ನಿರತನಾಗಿರುವನೋ ಇಲ್ಲವೋ ಎಂಬುದನ್ನು ಪರೀಕ್ಷಿಸುತ್ತಿದ್ದನು. ಶಿಷ್ಯನು ಕೂಡ ವಿದ್ಯಾಭ್ಯಾಸ ಮುಗಿದನಂತರ ಕೂಡ ತನ್ನ ಗುರುವನ್ನು ಭೆಟ್ಟಿಯಾಗುತ್ತಿದ್ದನು ಹಾಗೂ ಕಾಣಿಕೆಯನ್ನು ಕೊಡುತ್ತಿದ್ದನು.

ವೇದಾಧ್ಯಯನ ಮತ್ತು ಸಾಹಿತ್ಯದ ಅಭ್ಯಾಸಮಾಡುವ ವಿದ್ಯಾರ್ಥಿಗಳು ಪ್ರಾತಃಕಾಲದಲ್ಲಿ ಬೇಗನೆ ಏಳುತ್ತಿದ್ದರು. ಆಗ

ಡಿಯಾರಗಳು ಇರದ್ದರಿಂದ ಪಕ್ಷಿಗಳ ಧ್ವನಿಯೇ ಪ್ರಾತಃಕಾಲ
ಲ್ಲಿ ಅವರನ್ನು ಎಬ್ಬಿಸುವ ಗಂಟೆಯಾಗಿತ್ತು. ಮುಂಜಾನೆ ಎದ್ದ
ಡಲೆ ಸ್ನಾನಮಾಡಿ ಪ್ರಾರ್ಥನೆಗಳನ್ನು ಮಾಡುತ್ತಿದ್ದರು.
ದಾಧ್ಯಯನ ಮಾಡುವವರು ಮುಂಜಾನೆ ಯಜ್ಞಯಾಗಾದಿ
ಗೆ ಸಂಬಂಧಿಸಿದ ಅನೇಕ ಕಾರ್ಯಗಳನ್ನು ಮಾಡಬೇಕಾಗು
ತ್ತು. ಅವರು ವಿದ್ಯಾಭ್ಯಾಸವನ್ನು ಮುಗಿಸಿದ ಮೇಲೆ ಯಜ್ಞ
ಯಾಗಾದಿಗಳನ್ನು ಮಾಡಬೇಕಾಗುತ್ತಿತ್ತು. ಉಳಿದ ವಿದ್ಯಾರ್ಥಿ
ಳು ಪ್ರಾರ್ಥನೆಯನ್ನು ಮಾಡಿ ತಮ್ಮ ಅಧ್ಯಯನವನ್ನು
ಪ್ರಾರಂಭಿಸುತ್ತಿದ್ದರು. ಮಧ್ಯಾಹ್ನದ ಸುಮಾರಿಗೆ ಅಧ್ಯಯನವು
ಮುಗಿಯುತ್ತಿತ್ತು. ಆಮೇಲೆ ಊಟ ವಿಶ್ರಾಂತಿ. ಬಡ ವಿದ್ಯಾರ್ಥಿ
ಳು ಭಿಕ್ಷೆ ಬೇಡುತ್ತಿದ್ದರು. ಆಗಿನ ಕಾಲದಲ್ಲಿ ಭಿಕ್ಷೆ
ಬೇಡುವದು ತಪ್ಪು ಎಂದು ವಿದ್ಯಾರ್ಥಿಗಳಾಗಲಿ, ಸಮಾಜ
ವಾಗಲಿ ತಿಳಿದಿರಲಿಲ್ಲ. ವಿದ್ಯಾರ್ಥಿಗಳಾಗಿರುವವರೆಗೆ ಮಾತ್ರ
ರೀತಿ ಭಿಕ್ಷೆಬೇಡಲು ಅನುಮತಿ ಇತ್ತು. ಊಟ ಮತ್ತು
ಶ್ರಾಂತಿಯ ನಂತರ ಮತ್ತೆ ಅಧ್ಯಯನ. ಸಂಜೆಯ ವೇಳೆ
ಯನ್ನು ಶಾರೀರಿಕ ಚಟುವಟಿಕೆಗಾಗಿ ಮೀಸಲಾಗಿ ಇಡಲಾಗಿತ್ತು.
ಸೂರ್ಯನು ಮುಳುಗಿದ ಮೇಲೆ ಪ್ರಾರ್ಥನೆ ಮಾಡುತ್ತಿದ್ದರು.
ಮೇಲೆ ಸಂಜೆಯ ಊಟ. ರಾತ್ರಿಯ ವೇಳೆಯಲ್ಲಿ ಯಾವದೇ
ತಿಯ ಗೃಹಪಾಠಗಳನ್ನು ಮಾಡುವದಕ್ಕೆ ಅನುಕೂಲಗಳಿರಲಿಲ್ಲ.
ಮುದ್ರಣಾಲಯಗಳಿರಲಿಲ್ಲವಾದ್ದರಿಂದ ಪುಸ್ತಕಗಳ ಕೊರತೆ
ಯುತ್ತಿತ್ತು. ರಾತ್ರಿಯ ವೇಳೆಯಲ್ಲಿ ಹೆಚ್ಚಾಗಿ ಕಲಿತ ವಿಷಯ
ಗಳನ್ನು ಪುನರವಲೋಕನ ಮಾಡುತ್ತಿದ್ದರು.

ಆಗ ಈಗಿನಂತೆ ವರ್ಗಗಳಿರಲಿಲ್ಲ, ವಿದ್ಯಾಭ್ಯಾಸವು ಹೆಚ್ಚಾಗಿ ವೈಯಕ್ತಿಕವಾಗಿತ್ತು. ಪ್ರತಿಯೊಬ್ಬ ವಿದ್ಯಾರ್ಥಿಯು ಕಡೆಗೂ ಗಮನಕೊಡುವದು ಗುರುಗಳಿಗೆ ಸಾಧ್ಯವಿತ್ತು, ಯಾಕಂದರೆ ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚಾಗಿರಲಿಲ್ಲ. ಕೆಲವು ಸಾರೆ ಗುರುಗಳು ತಮ್ಮ ಶಿಷ್ಯರಲ್ಲಿ ಒಬ್ಬನನ್ನು ಬೇರೆ ವಿದ್ಯಾರ್ಥಿಗಳಿಗೆ ವಿದ್ಯೆ ಹೇಳಲು ಆಜ್ಞೆಮಾಡುತ್ತಿದ್ದನು. ಇದರಿಂದ ಜಾಣ ವಿದ್ಯಾರ್ಥಿಗಳಿಗೆ ಕಲಿಸುವ ಅನುಭವವು ಪ್ರಾರಂಭದಿಂದಲೇ ದೊರೆ ಯುತ್ತಿತ್ತು. ವಿದ್ಯಾರ್ಥಿಗಳ ಪರೀಕ್ಷೆಯು ದಿನಾಲು ನಡೆಯುತ್ತಿತ್ತು ಎಂದರೆ ತಪ್ಪಾಗಲಾರದು. ಹೇಳಿಕೊಟ್ಟ ವಿಷಯದಲ್ಲಿ ನಿಷ್ಣಾತನಾಗದೆ ಮುಂದಿನ ವಿಷಯವನ್ನು ಗುರುವು ಹೇಳುತ್ತಿ ದ್ದಿಲ್ಲ. ವಿದ್ಯೆಯು ಪೂರ್ಣವಾಗಬೇಕಾದರೆ ಗುರುವು ಶಿಷ್ಯನ ಜ್ಞಾನವನ್ನು ಕಂಡು ತೃಪ್ತನಾಗಬೇಕು. ಇಲ್ಲವಾದರೆ ಶಿಷ್ಯನಿಗೆ ಬಿಡುಗಡೆಯಿಲ್ಲ. ಆದ್ದರಿಂದ ಬೇರೆ ಬೇರೆ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸದ ಅವಧಿಯು ಬೇರೆ ಬೇರೆಯಾಗಿರುತ್ತಿತ್ತು. ಜಾಣ ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಬೇಗನೆ ಮುಗಿಸುತ್ತಿದ್ದರು. ಅವರವರ ಯೋಗ್ಯತೆಯ ಪ್ರಕಾರ ಅವಧಿಯು ಹೆಚ್ಚು ಕಡಿಮೆ ಯಾಗುತ್ತಿತ್ತು.

ಗುರುಕುಲಗಳಲ್ಲಿ ವಿದ್ಯಾಭ್ಯಾಸವು ಶ್ರಾವಣಮಾಸದ ಪ್ರಾರಂಭವಾಗುತ್ತಿತ್ತು ಹಾಗೂ ಆರು ತಿಂಗಳು ನಡೆಯುತ್ತಿತ್ತು ಆದರೆ ಮುಂದೆ ತತ್ತ್ವಜ್ಞಾನ, ತರ್ಕಶಾಸ್ತ್ರ ಮುಂತಾದ ವಿಷಯ ಗಳನ್ನು ಅಭ್ಯಾಸಮಾಡಲು ಆರಂಭಿಸಿದ ಮೇಲೆ ಕಲಿಯು

ಅವಧಿಯು ಹೆಚ್ಚಾಯಿತು. ಇತಿಹಾಸ ಪೂರ್ವಕಾಲದಲ್ಲಿ ಶಿಕ್ಷ ಣದ ಅವಧಿಯು ವರ್ಷದಲ್ಲಿ ಆರು ತಿಂಗಳಿತ್ತು.

ಆಶ್ರಮದ ನಿಯಮಗಳು ಕಟ್ಟುನಿಟ್ಟಾಗಿದ್ದವು. ಜ್ಞಾನ ಸಂಪಾದನೆ ಮಾಡುವದು ಮತ್ತು ಹೋಮ ಹವನಗಳನ್ನು ಮಾಡುವದು ವಿದ್ಯಾರ್ಥಿಯ ಕರ್ತವ್ಯವಾಗಿತ್ತು. ಮುಂಜಾನೆ ಮತ್ತು ಸಂಜೆಗೆ ಪ್ರಾರ್ಥನೆಗಳನ್ನು ಮಾಡಬೇಕಾಗುತ್ತಿತ್ತು. ನಿಯಮಗಳನ್ನು ಪಾಲಿಸದವರಿಗೆ ಉಗ್ರ ಶಿಕ್ಷೆ ಇತ್ತು. ನಮ್ಮ ಪೂರ್ವಜರು ಜ್ಞಾನಕ್ಕಿಂತಲೂ ಶೀಲಕ್ಕೆ ಹೆಚ್ಚು ಮಹತ್ವ ಕೊಡು ತ್ತಿದ್ದರು. 'ಶೀಲಂ ಪರಂ ಭೂಷಣಂ' ಎಂಬುದು ಅವರ ಮಂತ್ರವಾಗಿತ್ತು. ಸುಳ್ಳು ಹೇಳುವದು, ಮೋಸಮಾಡುವದು, ನಿಂದೆ ಮಾಡುವದು, ಅಪರಾಧಗಳಾಗಿದ್ದವು. ವಿದ್ಯಾರ್ಥಿಯು ಮಾತಿನಲ್ಲಿಯೂ ಕೃತಿಯಲ್ಲಿಯೂ ಸಂಯಮದಿಂದ ಇರಬೇಕಾ ಗಿತ್ತು. ಮಸಾಲೆಯ ಸಾಮಾನುಗಳು, ಮಾಂಸ, ಸಿಹಿ ಪದಾರ್ಥ ಗಳು, ಅಲಂಕಾರಗಳು, ಹೂವಿನ ಮಾಲೆಗಳು ಇವುಗಳಿಂದ ದೂರ ಇರಬೇಕಾಗಿತ್ತು.

ಗುರುಗಳು ಸಾದಾ ಜೀವನವನ್ನು ನಡೆಸುತ್ತಿದ್ದುದರಿಂದ ಶಿಷ್ಯರ ಮೇಲೆ ಅವರ ಪ್ರಭಾವವು ಸ್ವಾಭಾವಿಕವಾಗಿಯೇ ಆಗು ತ್ತಿತ್ತು. ಯಾವ ವಿಷಯವನ್ನು ತೆಗೆದುಕೊಂಡರೂ ಅದರಲ್ಲಿ ಪಾಂಡಿತ್ಯವನ್ನು ಅವರು ಪಡೆಯುತ್ತಿದ್ದರು. ಕೆಲವರು ಜೀವಿ ಸುವವರೆಗೆ ಆಜನ್ಮ ಬ್ರಹ್ಮಚಾರಿಗಳಾಗಿ ಜ್ಞಾನಯಜ್ಞದಲ್ಲಿ ತೊಡಗಿರುತ್ತಿದ್ದರು. ಅದಕ್ಕಾಗಿಯೇ ಆಗಿನಕಾಲದಲ್ಲಿ ಗುರು

ಗಳನ್ನು ಬಹಳ ಪೂಜ್ಯ ಬುದ್ಧಿಯಿಂದ ಕಾಣುತ್ತಿದ್ದರು. ಅವರಲ್ಲಿ ಕೇವಲ ಪಾಂಡಿತ್ಯವಿದ್ದರೆ ತೀರಲಿಲ್ಲ, ಅನೇಕ ಶಾಸ್ತ್ರ ಗ್ರಂಥಗಳನ್ನು ತಿಳಿದವರೂ, ದೀರ್ಘ ವ್ಯಾಸಂಗಿಗಳೂ, ಚೆನ್ನಾಗಿ ವಾದಮಾಡಬಲ್ಲವರೂ, ಪ್ರತಿಭಾ ಶಕ್ತಿಯುಳ್ಳವರೂ ಆಗಿರಬೇಕಾಗಿತ್ತು. ವಿದ್ಯಾರ್ಥಿಗಳಿಗೆ ಕೇವಲ ಜ್ಞಾನವನ್ನು ಕೊಡುವದಲ್ಲದೆ ಅವರಲ್ಲಿ ಜಿಜ್ಞಾಸೆಯನ್ನು ಉಂಟುಮಾಡುವ ಶಕ್ತಿಯು ಗುರುವಿನಲ್ಲಿ ಇರಬೇಕಾಗಿತ್ತು.

ಶಿಕ್ಷಕರಾದವರು ಪ್ರಾಚೀನ ಭಾರತದಲ್ಲಿ ತಮ್ಮ ಯೋಗ್ಯತೆಯಿಂದ ಜನರ ಆದರಾನುರಾಗಗಳಿಗೆ ಪಾತ್ರರಾಗಿದ್ದರು. ಹೆಚ್ಚು ವಿದ್ಯಾರ್ಥಿಗಳನ್ನು ಸಂಪಾದಿಸಲು ಗುರುಗಳು ತಮ್ಮೊಳಗೆ ಸ್ಪರ್ಧಿಸುತ್ತಿದ್ದರು. ಈ ಸ್ಪರ್ಧೆಗಳು ಅಸೂಯೆಯಿಂದ ಉಂಟಾದವುಗಳಲ್ಲ. ಒಬ್ಬ ಗುರುವು ಮತ್ತೊಬ್ಬನಿಗಿಂತ ಯಾವದೊಂದು ವಿಷಯದಲ್ಲಿ ಕಡಿಮೆ ಯೋಗ್ಯತೆಯುವನೆಂದು ಸಿದ್ಧವಾದರೆ ಅವನು ತನ್ನ ಆಶ್ರಮವನ್ನು ಮುಚ್ಚಿ ಅವನ ಶಿಷ್ಯನಾಗುತ್ತಿದ್ದನು.

# ತಕ್ಷಶಿಲಾ

## (ಕ್ರಿ. ಶ. ಪೂರ್ವ ೮೦೦ ರಿಂದ ಕ್ರಿ. ಶ. ೪೦೦)

ಈಗ ಪಾಕಿಸ್ತಾನದಲ್ಲಿರುವ ರಾವಳಪಿಂಡಿಯಿಂದ ಇಪ್ಪತ್ತು ಮೈಲು ದೂರದಲ್ಲಿ ಈ ವಿಶ್ವವಿದ್ಯಾಲಯವಿತ್ತು. ಈ ನಗರದ ಇತಿಹಾಸವು ಬಹಳ ಪ್ರಾಚೀನವಾಗಿದೆ. ಈ ನಗರವು ಭರತ ಚಕ್ರವರ್ತಿಯಿಂದ ಸ್ಥಾಪಿಸಲ್ಪಟ್ಟಿತು. ಭರತನ ಮಗನಾದ ತಕ್ಷಕನ ಹೆಸರನ್ನು ಈ ನಗರಕ್ಕೆ ಇಡಲಾಯಿತು. ಈ ನಗರದ ಉಲ್ಲೇಖವು ರಾಮಾಯಣ, ಮಹಾಭಾರತಗಳಲ್ಲಿಯೂ, ದೊರೆಯುವದು. ಧೌಮ್ಯ ಋಷಿಯು ತಕ್ಷಶಿಲಾ ವಿಶ್ವವಿದ್ಯಾಲಯದ ಅಧ್ಯಕ್ಷನಾಗಿದ್ದನೆಂದು ಮಹಾಭಾರತದಲ್ಲಿ ಉಲ್ಲೇಖಿಸಲಾಗಿದೆ. ಬೌದ್ಧರ ಜಾತಕಗಳಲ್ಲಿಯೂ ಈ ನಗರದ ಉಲ್ಲೇಖವು ದೊರೆಯುವದು.

ಮೊದಲು ಇದು ವೈದಿಕ ಧರ್ಮದ ಕೇಂದ್ರವಾಗಿತ್ತು. ನಂತರ ಬೌದ್ಧರ ಕೇಂದ್ರವಾಯಿತು. ತಕ್ಷಶಿಲಾ ನಗರವು ಗಾಂಧಾರ ದೇಶದ ರಾಜಧಾನಿಯು.

ಈ ಪಟ್ಟಣವು ಗ್ರೀಕ, ಪರ್ಶಿಯನ್, ಸಿಥಿಯನ್ ಮೊದಲಾದ ಪರಕೀಯರ ದಾಳಿಗೆ ಗುರಿಯಾಗಿತ್ತು. ಗ್ರೀಕರು ಸುಮಾರು ಒಂದು ನೂರಾ ಇಪ್ಪತ್ತೈದು ವರ್ಷಗಳವರೆಗೆ ಇಲ್ಲಿ

ರಾಜ್ಯವಾಳಿದರು. ಆದ್ದರಿಂದ ಅವರ ಪ್ರಭಾವವು ಈ ನಗರದ ಮೇಲೆ ಆಗುವದು ಸ್ವಾಭಾವಿಕವಾಗಿದೆ.

ಆಧುನಿಕ ಅರ್ಥದಲ್ಲಿ ಇದು ವಿಶ್ವವಿದ್ಯಾಲಯವಾಗಿರಲಿಲ್ಲ. ಆದರೆ ವಿದ್ಯೆಯ ಕೇಂದ್ರವಾಗಿತ್ತು. ಇಲ್ಲಿ ಯಾವದೇ ರೀತಿಯ ಆಶ್ರಮವಿರಲಿಲ್ಲ, ಬೇರೆ ಬೇರೆ ವಿಷಯಗಳನ್ನು ಮಾತ್ರ ಇಲ್ಲಿ ಕಲಿಸುತ್ತಿದ್ದರು. ವಿಶ್ವವಿದ್ಯಾಲಯದವರು ಯಾವ ಪದವಿಯನ್ನು ಕೊಡುತ್ತಿರಲಿಲ್ಲ.

ಇಲ್ಲಿಯ ಪ್ರಾಧ್ಯಾಪಕರು ತಮ್ಮ ವಿಷಯಗಳಲ್ಲಿ ಅಗಾಧ ಪಂಡಿತರಾಗಿದ್ದರು. ಅದಕ್ಕಾಗಿಯೇ ಬೇರೆ ಬೇರೆ ದೇಶಗಳಿಂದ ವಿದ್ಯಾರ್ಥಿಗಳು ಇಲ್ಲಿಗೆ ಅಭ್ಯಾಸಮಾಡಲು ಬರುತ್ತಿದ್ದರು. ಬಡ ವಿದ್ಯಾರ್ಥಿಗಳಿಗೆ ಪುಕ್ಕಟೆಯಾಗಿ ಶಿಕ್ಷಣ, ಅರಿವೆ, ಊಟ ಮತ್ತು ಔಷಧೋಪಚಾರಗಳು ದೊರೆಯುತ್ತಿದ್ದವು. ಪ್ರತಿಯೊಬ್ಬ ಗುರುವಿನ ಬಳಿಯಲ್ಲಿ ಇಪ್ಪತ್ತು ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದರು. ಈ ವಿಶ್ವವಿದ್ಯಾಲಯದಲ್ಲಿ ಬೇರೆ ಬೇರೆ ಜಾತಿಗಳಿಗೆ ಸೇರಿದವರು ತಮಗೆ ಇಷ್ಟ ಬಂದ ವಿಷಯಗಳನ್ನು ಅಭ್ಯಾಸ ಮಾಡುತ್ತಿದ್ದರು. ಯಾವದೇ ತರದ ನಿರ್ಬಂಧವಿರಲಿಲ್ಲ.

ಮೂರು ವೇದಗಳು, ವ್ಯಾಕರಣ, ತತ್ತ್ವಜ್ಞಾನ ಮತ್ತು ಹದಿನೆಂಟು ಶಿಲ್ಪಗಳನ್ನು ಕಲಿಯುತ್ತಿದ್ದರು. ಹದಿನೆಂಟು ಶಿಲ್ಪಗಳೆಂದರೆ ಆಯುರ್ವೇದ, ಧನುರ್ವೇದ, ಖಗೋಲಶಾಸ್ತ್ರ, ಒಕ್ಕಲತನ, ಜ್ಯೋತಿಷ್ಯಶಾಸ್ತ್ರ ಮೊದಲಾದವುಗಳು. ಕ್ಷತ್ರಿಯರೂ ಕೂಡ ವೇದಗಳನ್ನು ಅಧ್ಯಯನ ಮಾಡುತ್ತಿದ್ದರು. ಬ್ರಾಹ್ಮಣರೂ ಧನುರ್ವೇದವನ್ನು ಅಧ್ಯಯನ ಮಾಡುತ್ತಿದ್ದರು.

ತಕ್ಷಶಿಲಾ ವಿಶ್ವವಿದ್ಯಾಲಯವು ಧನುರ್ವಿದ್ಯೆ, ವೈದ್ಯಶಾಸ್ತ್ರ ಮತ್ತು ಶಿಲ್ಪಕಲೆಗಳಿಗೆ ಹೆಸರುವಾಸಿಯಾಗಿತ್ತು. ಜೀವಕ ಎಂಬ ಪ್ರಸಿದ್ಧ ವೈದ್ಯನ ಬಗ್ಗೆ ವಿನಯ ಪಿಟಕದಲ್ಲಿ ಸಾಕಷ್ಟು ವಿಷಯವು ದೊರೆಯುವದು. ಇವನು ತಕ್ಷಶಿಲೆಯಲ್ಲಿ ವೈದ್ಯಶಾಸ್ತ್ರವನು ಅಭ್ಯಾಸಮಾಡಿದನು. ಇವನು ರಾಜಗ್ರಹದಿಂದ ವೈದ್ಯಶಾಸ್ತ್ರ ವನ್ನು ಅಭ್ಯಾಸಮಾಡಲು ಬಂದಿದ್ದನು. ಇಲ್ಲಿಗೆ ಬಂದಮೇಲೆ ಏಳು ವರ್ಷಗಳವರೆಗೆ ಆಯುರ್ವೇದವನ್ನು ಅಭ್ಯಾಸ ಮಾಡಿದನು. ಸಣ್ಣ ಮಕ್ಕಳ ಚಿಕಿತ್ಸೆಯಲ್ಲಿ ಅವನು ಪಾರಂಗತನಾದನು. ಅವನು ಪ್ರಸಿದ್ಧ ವೈದ್ಯನಾಗಿದ್ದನಲ್ಲದೆ ಶಸ್ತ್ರಚಿಕಿತ್ಸೆಯಲ್ಲಿಯೂ ನಿಪುಣ ನಾಗಿದ್ದನು. ಅವನು ಒಬ್ಬ ವರ್ತಕನ ತಲೆಯನ್ನು ಕೂಡ ಶಸ್ತ್ರ ಚಿಕಿತ್ಸೆಗೆ ಒಳಪಡಿಸಿದ ಉಲ್ಲೇಖವು ವಿನಯ ಪಿಟಕದಲ್ಲಿ ದೊರೆ ಯುವದು. ಮಗಧ ದೇಶದ ರಾಜನಾದ ಬಿಂಬಸಾರನು ಇವ ನನ್ನು ತನ್ನ ಮುಖ್ಯ ವೈದ್ಯನೆಂದು ನೇಮಿಸಿದ್ದನು. ಆಗಿನ ಕಾಲದಲ್ಲಿ ಇವನ ಕೀರ್ತಿಯು ಅವಸ್ತಿಯಿಂದ ಉಜ್ಜಯನಿಯವರೆಗೆ ಹಬ್ಬಿತ್ತು.

ಏಳು ವರ್ಷಗಳವರೆಗೆ ಅಭ್ಯಾಸಮಾಡಿದರೂ ಇವನ ಗುರುವು ಇವನ ಶಿಕ್ಷಣ ಮುಕ್ತಾಯದ ಬಗ್ಗೆ ಏನೂ ಹೇಳಲಿಲ್ಲ. ಇವನಾದರೋ ಎಲ್ಲ ವಿಷಯಗಳಲ್ಲಿ ನಿಷ್ಣಾತನಾಗಿದ್ದನು. ಆಗ ಇವನು ತನ್ನ ಗುರುಗಳನ್ನು ಕಂಡು ನನ್ನ ಶಿಕ್ಷಣವು ಯಾವಾಗ ಪೂರ್ಣವಾಗುವದು ? ಎಂದು ಪ್ರಶ್ನೆ ಮಾಡಿದನು. ಆಗ ಗುರುವು ಅವನಿಗೆ ಹೀಗೆ ನುಡಿದನು. "ಕೈಯಲ್ಲಿ ಒಂದು ಆಯುಧವನ್ನು ತೆಗೆದುಕೊಂಡು ಈ ವಿದ್ಯಾಲಯದ ಸುತ್ತಲೂ

ಒಂದು ಯೋಜನ ಸಂಚರಿಸು. ಯಾವದಾದರೂ ನಿರುಪಯುಕ್ತವಾದ ವನಸ್ಪತಿಯು ಕಂಡಬಂದರೆ ಅದನ್ನು ತೆಗೆದುಕೊಂಡು ಬಾ! ಎಂದು ಆಜ್ಞೆಮಾಡಿದನು. ಗುರುವಿನಿಂದ ಆಜ್ಞೆಯನ್ನು ಪಡೆದು ಶಿಷ್ಯನು ನಾಲ್ಕು ದಿಕ್ಕಿಗೆ ಸಂಚಾರಕ್ಕೆ ಹೊರಟನು. ಅವನು ನಾಲ್ಕೂ ದಿಕ್ಕಿನಲ್ಲಿ ಸಂಚರಿಸಿದನು. ಆದರೆ ಯಾವ ಕಡೆಯಲ್ಲಿಯೂ ನಿರುಪಯುಕ್ತವಾದ ವನಸ್ಪತಿಯು ದೊರೆಯಲಿಲ್ಲ. ಅವನು ತಿರುಗಿ ಬಂದು ಯಾವ ವನಸ್ಪತಿಯೂ ನಿರುಪಯುಕ್ತವಾಗಿಲ್ಲವೆಂದು ಗುರುಗಳಿಗೆ ನಿವೇದಿಸಿದನು. ಗುರುವು ಶಿಷ್ಯನ ಮಾತನ್ನು ಕೇಳಿ ಸಂತುಷ್ಟನಾಗಿ ನುಡಿದನು. "ನೀನು ಗಳಿಸಿದ ಜ್ಞಾನವು ನಿನ್ನ ಉಪಜೀವನಕ್ಕೆ ಸಾಕಷ್ಟು ಆಗಿರುವದು. ಈಗ ನೀನು ತಿರುಗಿ ನಿನ್ನ ಊರಿಗೆ ಹೋಗಲಡ್ಡಿಯಿಲ್ಲ, ನಿನಗೆ ದಾರಿಯ ವೆಚ್ಚಕ್ಕೆಂದು ಸ್ವಲ್ಪ ಹಣವನ್ನು ತೆಗೆದುಕೊ! ಎಂದು ಶಿಷ್ಯನಿಗೆ ಸ್ವಲ್ಪ ಹಣವನ್ನು ಕೊಟ್ಟನು. ಆಗಿನ ಕಾಲದಲ್ಲಿ ವಿಶ್ವವಿದ್ಯಾಲಯದಲ್ಲಿಯ ಶಿಕ್ಷಣವನ್ನು ಮುಗಿಸಿದ ಮೇಲೆ ಶಿಷ್ಯನ ದಾರಿಯ ವೆಚ್ಚಕ್ಕೆಂದು ಗುರುವು ಶಿಷ್ಯನಿಗೆ ಹಣವನ್ನು ಕೊಡುವ ಪದ್ಧತಿ ಇತ್ತು. ಬಹಳ ದೂರದ ಊರಿಂದ ವಿದ್ಯಾರ್ಥಿಗಳು ಬರುತ್ತಿದ್ದುದರಿಂದ ಅವರಿಗೆ ಈ ಹಣವು ಪ್ರವಾಸ ಮಾಡಲು ಅನುಕೂಲವಾಗುತ್ತಿತ್ತು. ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಬಂದಮೇಲೆ ತಂದೆ ತಾಯಿಗಳು ಮನೆಯಲ್ಲಿ ಸಮಾರಂಭವನ್ನು ಏರ್ಪಡಿಸುತ್ತಿದ್ದರು. ಆಗ ಪ್ರವಾಸಮಾಡುವದು ಸುಲಭವಾಗಿರಲಿಲ್ಲವಾದ್ದರಿಂದ ಸುಖರೂಪವಾಗಿ ಬಂದ ತಮ್ಮ ಮಕ್ಕಳ ಪ್ರೀತ್ಯರ್ಥವಾಗಿ ಈ ಸಮಾರಂಭಗಳು ಏರ್ಪಡುತ್ತಿದ್ದವು. ಇಂತಹ ಅನೇಕ ಉದಾಹರಣೆಗಳು ದೊರೆಯುವವು.

ತಕ್ಷಶಿಲಾ ವಿಶ್ವವಿದ್ಯಾಲಯವು ಆಯುರ್ವೇದದಂತೆ ಧನುರ್ವಿದ್ಯೆಯಲ್ಲಿಯೂ ಹೆಸರುವಾಸಿಯಾಗಿತ್ತು. ಒಂದು ಸಮಯದಲ್ಲಿ ೧೦೩ ರಾಜಕುಮಾರರು ಈ ವಿಶ್ವವಿದ್ಯಾಲಯದಲ್ಲಿ ಅಸ್ತ್ರವಿದ್ಯೆಯನ್ನು ಕಲಿಯುತ್ತಿದ್ದರು ಎಂದು ಜಾತಕಗಳಲ್ಲಿ ಹೇಳಲಾಗಿದೆ. ಮಹಾಭಾರತದಲ್ಲಿ ಅನೇಕ ಶಸ್ತ್ರಾಸ್ತ್ರಗಳ ಉಲ್ಲೇಖವು ದೊರೆಯುವದು. ಈ ವಿವಿಧ ಶಸ್ತ್ರಾಸ್ತ್ರಗಳ ಅಭ್ಯಾಸವು ವೈಜ್ಞಾನಿಕ ದೃಷ್ಟಿಯಿಂದ ನಡೆಯಬೇಕು. ಅಂದರೆ ಅವರು ಸಾಧಿಸಿದ ಪ್ರಗತಿಯ ಕಲ್ಪನೆಯು ನಮಗಾಗುವದು. ಈ ಶಸ್ತ್ರಾಸ್ತ್ರಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ನಮ್ಮ ಜನರು ಈ ವಿದ್ಯೆಯಲ್ಲಿ ಎಷ್ಟು ಪ್ರಗತಿಯನ್ನು ಸಾಧಿಸಿದ್ದರು ಎಂಬುದು ಗೊತ್ತಾಗುತ್ತದೆ.

ಶಿಲ್ಪಕಲೆಯ ವಿಷಯವಾಗಿಯೂ ಈ ವಿಶ್ವವಿದ್ಯಾಲಯವು ಹೆಸರುವಾಸಿಯಾಗಿತ್ತು. ಗ್ರೀಕರ ಸಂಪರ್ಕವು ಬಂದ ಮೇಲೆ ಗ್ರೀಕರ ಶಿಲ್ಪಕಲೆಯ ಪ್ರಭಾವವು ಈ ವಿಶ್ವವಿದ್ಯಾಲಯದ ಮೇಲೆ ಆಯಿತು. ಅಂದಿನಿಂದ ಸುಂದರವಾದ ಮೂರ್ತಿಗಳನ್ನು ತಯಾರಿಸುವ ಕಲೆಯು ಭಾತರ ದಲ್ಲಿ ಪ್ರಾರಂಭವಾಯಿತು.

ಈ ವಿಶ್ವವಿದ್ಯಾಲಯವು ಹೂಣರ ದಾಳಿಗೆ ಆಹುತಿಯಾಯಿತು. ಈ ಹೂಣರ ದಾಳಿಯು ಕ್ರಿ. ಶ. ೪೫೦ ರಿಂದ ೫೦೦ರ ಸುಮಾರಿಗೆ ನಡೆದಂತೆ ತೋರುತ್ತದೆ. ೫ನೇ ಶತಮಾನದಲ್ಲಿ ಚೀನದ ಪ್ರವಾಸಿ ಫಾಹಿಯಾನನು ಈ ಪ್ರದೇಶಕ್ಕೆ ಭೇಟ್ಟಿ ಕೊಟ್ಟನು. ಆಗ ಇಲ್ಲಿ ಯಾವ ವಿದ್ಯಾ ಕೇಂದ್ರವೂ ಇರಲಿಲ್ಲ. ಅಂದ ಮೇಲೆ ಇದಕ್ಕೂ ಮೊದಲೇ ಇದು ನಾಶವಾಗಿರಬೇಕು.

ನಾಲಂದಾ (ಕ್ರಿ. ಶ. ೪೫೦ ರಿಂದ ೧೨೮೦)

ಬಿಹಾರ ಪ್ರಾಂತದಲ್ಲಿರುವ ಪಾಟಣಾದಿಂದ ೪೦ ಮೈಲಿನ ಮೇಲೆ ಈ ವಿಶ್ವವಿದ್ಯಾಲಯವು ಅಸ್ತಿತ್ವದಲ್ಲಿತ್ತು. ಇದರ ಅವಶೇಷಗಳು ದೊರೆತಿರುವದರಿಂದ ಅದರ ವೈಭವದ ಕಲ್ಪನೆಯು ನಮಗಾಗುವದು.

ಗುಪ್ತ ಅರಸರು ಹಿಂದುಗಳಾದರೂ ಈ ಬೌದ್ಧ ವಿಶ್ವವಿದ್ಯಾಲಯಕ್ಕೆ ಉದಾರ ಹಸ್ತದಿಂದ ದಾನಮಾಡಿದರು. ಇದು ಆಗಿನ ಕಾಲದ ಅರಸರ ವಿಶಾಲ ದೃಷ್ಟಿಯನ್ನು ತೋರಿಸುತ್ತದೆ. ಗುಪ್ತ ದೊರೆಯಾದ ಕುಮಾರಗುಪ್ತನು (೪೧೪–೪೫೫) ನಾಲಂದಾದಲ್ಲಿ ಒಂದು ವಿಹಾರವನ್ನು ಕಟ್ಟಿಸಿದನು. ಅಂದಿನಿಂದ ಈ ನಗರದ ಅಭಿವೃದ್ಧಿಯು ಪ್ರಾರಂಭವಾಯಿತು.

ಹುಯೆನ್‌ತ್ಸಾಂಗನು ಕ್ರಿ. ಶಕ ಏಳನೇ ಶತಮಾನದಲ್ಲಿ ಹಿಂದುಸ್ತಾನಕ್ಕೆ ಬಂದಿದ್ದನು. ಆ ಕಾಲದಲ್ಲಿ ಈ ವಿಶ್ವವಿದ್ಯಾಲಯವು ವೈಭವದ ಶಿಖರಕ್ಕೆ ಏರಿತ್ತು. ಆಗ ಈ ವಿಶ್ವವಿದ್ಯಾಲಯದಲ್ಲಿ ಹತ್ತುಸಾವಿರ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದರು.

ಇಲ್ಲಿ ಅನೇಕ ಬೌದ್ಧ ವಿದ್ವಾಂಸರು ವಾಸವಾಗಿದ್ದರು. ನೂರಾರು ಜನ ವಿದ್ವಾಂಸರು ತಮ್ಮ ವಿಷಯಗಳಲ್ಲಿ ಪಂಡಿತರಾಗಿದ್ದುದಲ್ಲದೆ, ಅನೇಕ ಗ್ರಂಥಗಳನ್ನು ಬರೆದಿದ್ದರು. ಇವರಿಗೆ ಅಭ್ಯಾಸ ಮಾಡಲು ರಾತ್ರಿ ಹಗಲುಗಳು ಸಾಕಾಗುತ್ತಿರಲಿಲ್ಲ! ಬೇರೆ ಬೇರೆ

ದೇಶದ ವಿದ್ಯಾರ್ಥಿಗಳು ತಮ್ಮ ಸಂಶಯುಗಳನ್ನು ನಿವಾರಣೆ ಮಾಡಿಕೊಳ್ಳವದಕ್ಕಾಗಿ ಇಲ್ಲಿಗೆ ಬರುತ್ತಿದ್ದರು. ಈ ವಿಶ್ವವಿದ್ಯಾಲಯದ ಕೀರ್ತಿಯು ದೇಶ ವಿದೇಶಗಳಲ್ಲಿಯೂ ಹಬ್ಬಿತ್ತು. ಟಿಬೇಟ, ಚೀನ, ಮಂಗೋಲಿಯಾ, ಸುಮಾತ್ರಾ, ಸಿಂಹಳದ್ವೀಪ ಮುಂತಾದ ದೇಶಗಳಿಂದ ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದರು. ಬಂದವರಿಗೆಲ್ಲ ಇಲ್ಲಿ ಪ್ರವೇಶವು ದೊರೆಯು ತ್ತಿರಲಿಲ್ಲ. ಇಲ್ಲಿ ಪ್ರವೇಶ ದೊರೆಯಬೇಕಾದರೆ ದ್ವಾರಪಂಡಿತರು ತೆಗೆದುಕೊಳ್ಳುವ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗುತ್ತಿತ್ತು. ಈ ದ್ವಾರಪಂಡಿತರು ತಮ್ಮ ತಮ್ಮ ವಿಷಯಗಳಲ್ಲಿ ವಿಖ್ಯಾತರಾದ ವಿದ್ವಾಂಸರಾಗಿದ್ದರು. ಕಾಲಕಾಲಕ್ಕೆ ಅತ್ಯಂತ ಪ್ರಸಿದ್ಧರಾದ ವಿದ್ವಾಂಸರನ್ನು ದ್ವಾರಪಂಡಿತರನ್ನಾಗಿ ನೇಮಿಸುತ್ತಿದ್ದರು. ನೂರರಲ್ಲಿ ಹತ್ತು ಜನರಿಗೆ ಮಾತ್ರ ಇಲ್ಲಿ ಪ್ರವೇಶ ದೊರೆಯುತ್ತಿತ್ತು.

ಹುಯೆನ್‌ತ್ಸಾಂಗನು ಇಲ್ಲಿಯ ಪ್ರಸಿದ್ಧ ವಿದ್ವಾಂಸರ ಒಂದು ಯಾದಿಯನ್ನೇ ಕೊಟ್ಟಿರುವನು. ಅವನ ಕಾಲದಲ್ಲಿ ಈ ವಿಶ್ವ ವಿದ್ಯಾಲಯದಲ್ಲಿ ೧೫೧೦ ಪ್ರಾಧ್ಯಾಪಕರಿದ್ದರು. ಇಲ್ಲಿ ಪ್ರತಿದಿನ ಬೇರೆ ಬೇರೆ ವಿದ್ವಾಂಸರಿಂದ ಒಂದು ನೂರು ವ್ಯಾಖ್ಯಾನಗಳು ನಡೆಯುತ್ತಿದ್ದವು.

ಇಲ್ಲಿ ಪ್ರವೇಶ ದೊರೆಯುವಾಗ ವಿದ್ಯಾರ್ಥಿಗಳ ವಯಸ್ಸು ಸಾಧಾರಣವಾಗಿ ಹದಿನಾರು. ಅವರು ಸುಮಾರು ಹನ್ನೆರಡು ವರ್ಷಗಳ ವರೆಗೆ ಇಲ್ಲಿ ಅಭ್ಯಾಸ ಮಾಡುತ್ತಿದ್ದರು. ಇಲ್ಲಿಯ ಭಿಕ್ಷುಗಳು ತಮ್ಮ ಚಾರಿತ್ರ್ಯ ಮತ್ತು ಜ್ಞಾನಕ್ಕಾಗಿ ಹಿಂದುಸ್ತಾನ

ದಲ್ಲಿ ಹೆಸರುವಾಸಿಯಾಗಿದ್ದರು. ೮೦೦ ವರ್ಷಗಳ ಇದರ ಇತಿಹಾಸದಲ್ಲಿ ಯಾವ ದುರ್ಘಟನೆಯೂ ಇಲ್ಲಿ ನಡೆದಿಲ್ಲವೆಂಬುದೇ ಇದರ ಮಹತಿಯನ್ನು ಸಾರುತ್ತದೆ.

ಈ ವಿಶ್ವವಿದ್ಯಾಲಯಕ್ಕೆ ೨೦೦ ಹಳ್ಳಿಗಳನ್ನು ದಾನವಾಗಿ ಕೊಟ್ಟಿದ್ದರು. ಇದರಿಂದ ಈ ವಿಶ್ವವಿದ್ಯಾಲಯದಲ್ಲಿರುವ ವಿದ್ಯಾರ್ಥಿಗಳ ಊಟದ ಮತ್ತು ಬಟ್ಟೆಗಳ ವ್ಯವಸ್ಥೆಯನ್ನು ಮಾಡಲು ಸಾಧ್ಯವಾಗಿತ್ತು.

ಇಲ್ಲಿಯ ವಿದ್ವಾಂಸರಲ್ಲಿ ಧರ್ಮಪಾಲ ಮತ್ತು ಚಂದ್ರಪಾಲ ಎಂಬುವರು ಬುದ್ಧನ ಉಪದೇಶವನ್ನು ಪ್ರಚಾರ ಮಾಡಿದವರಲ್ಲಿ ಪ್ರಮುಖರು. ಗುಣಮತಿ, ಸ್ಥಿರಮತಿ ಎಂಬವರು ಆಗ ಲೋಕ ವಿಖ್ಯಾತರಾಗಿದ್ದರು. ಪ್ರಭಾಮಿತ್ರನು ವಾದವಾಡುವದ ರಲ್ಲಿಯೂ, ಜಿನಮಿತ್ರನು ಸಂಭಾಷಣಾ ಕೌಶಲದಲ್ಲಿಯೂ ಹೆಸ ರಾಗಿದ್ದರು. ಅನೇಕ ಭಿಕ್ಷುಗಳು ಒಂದೇ ವಿಷಯದಲ್ಲಿ ಪಂಡಿತ ರಲ್ಲ; ಅನೇಕ ವಿಷಯಗಳಲ್ಲಿ ಖ್ಯಾತನಾಮರು.

ನಾಲಂದಾ ವಿಶ್ವವಿದ್ಯಾಲಯದ ಅಧಿಕಾರಿಗಳು ಗ್ರಂಥಾಲಯದ ಮಹತ್ವವನ್ನು ಅರಿತಿದ್ದರು. ಆಗಿನ ಕಾಲದಲ್ಲಿ ಗ್ರಂಥಗಳನ್ನು ಕೈಯಿಂದ ಬರೆಯಬೇಕಾಗುತ್ತಿತ್ತು. ಇಂಥ ಸಮಯದಲ್ಲಿಯೂ ಇಲ್ಲಿಯ ಗ್ರಂಥಾಲಯದಲ್ಲಿ ಸಾವಿರಾರು ಅಮೂಲ್ಯವಾದ ಗ್ರಂಥಗಳಿದ್ದವು. ಚೀನ ದೇಶದ ಯಾತ್ರಿಕರು ಬೌದ್ಧ ಗ್ರಂಥಗಳ ಅಭ್ಯಾಸ ಮಾಡುವದಕ್ಕೆ ಇಲ್ಲಿಗೆ ಬರುತ್ತಿದ್ದರು. ಇತ್ಸಿಂಗನು ೪೦೦ ಗ್ರಂಥಗಳ ಭಾಷಾಂತರವನ್ನು ಮಾಡಿದನೆಂದು

ಹೇಳಲಾಗಿದೆ. ಇಲ್ಲಿಯ ಗ್ರಂಥಾಲಯವು ಮೂರು ಕಟ್ಟಡ ಗಳಲ್ಲಿ ವ್ಯಾಪಿಸಿತ್ತು. ಅವುಗಳಿಗೆ ರತ್ನಗಂಜ, ರತ್ನೋದಧಿ, ಮತ್ತು ರತ್ನರಂಜಕ ಎಂದು ಕರೆಯುತ್ತಿದ್ದರು. ಈ ಗ್ರಂಥಭಂಡಾರವಿದ್ದ ಒಂದು ಕಟ್ಟಡವು ಒಂಬತ್ತು ಅಂತಸ್ತುಗಳ ದಿತ್ತು. ಇಷ್ಟು ದೊಡ್ಡ ಗ್ರಂಥಭಂಡಾರವು ಪ್ರಾಚೀನ ಕಾಲದಲ್ಲಿ ಯಾವ ದೇಶದಲ್ಲಿಯೂ ಇರಲಿಲ್ಲ. ಇಂಥ ಗ್ರಂಥಭಂಡಾರದ ಕಟ್ಟಡವು ಈ ಕಾಲದಲ್ಲಿಯೂ ನೋಡಲು ದೊರೆಯಲಾರದು. ಒಂದು ಕಟ್ಟಡವು ಒಂಬತ್ತು ಅಂತಸ್ತಿನದಾದರೆ ಉಳಿದ ಎರಡು ಕಟ್ಟಡಗಳು ಆರು ಅಂತಸ್ತಿನವಿದ್ದವು.

ಏಶಿಯಾ ಖಂಡದಲ್ಲಿಯೇ ನಾಲಂದಾ ವಿಶ್ವವಿದ್ಯಾಲಯವು ಪ್ರಖ್ಯಾತವಾಗಿತ್ತು. ಇಲ್ಲದಿದ್ದರೆ ಹುಯೆನ್‌ತ್ಸಾಂಗನಂಥವರು ಕಷ್ಟಪಟ್ಟು ಈ ವಿಶ್ವವಿದ್ಯಾಲಯಕ್ಕೆ ಬರುತ್ತಿರಲಿಲ್ಲ. ಇವನ ತರುವಾಯ ಇತ್ಸಿಂಗನು ಭಾರತಕ್ಕೆ ಬಂದನು. ಇವನು ಹತ್ತು ವರ್ಷ ನಾಲಂದಾದಲ್ಲಿ ಇದ್ದನು. ಇವನು ಬರೆದಿರುವ ಲೇಖನ ದಿಂದ ಬೇರೆ ಬೇರೆ ದೇಶಗಳಿಂದ ಬಂದ ೫೬ ವಿದ್ವಾಂಸರು ಇಲ್ಲಿ ಇದ್ದರೆಂದು ತಿಳಿಯುತ್ತದೆ.

ವ್ಯಾಕರಣ, ಸಾಹಿತ್ಯ ತರ್ಕಶಾಸ್ತ್ರ, ವೈದಿಕ ಧರ್ಮಗ್ರಂಥ ಗಳು, ಮಹಾಯಾನ ಬೌದ್ಧ ಧರ್ಮಗ್ರಂಥಗಳು, ಯೋಗ ವಿದ್ಯಾ ಮುಂತಾದ ವಿಷಯಗಳು ಇಲ್ಲಿ ಕಲಿಸಲ್ಪಡುತ್ತಿದ್ದವು. ಬೌದ್ಧ ಧರ್ಮದೊಂದಿಗೆ ಹಿಂದೂ ಮತ್ತು ಜೈನ ಧರ್ಮಗಳ ಅಭ್ಯಾಸವೂ ಇಲ್ಲಿ ನಡೆಯುತ್ತಿತ್ತು. ವ್ಯವಹಾರಿಕ ವಿಷಯಗಳನ್ನೂ ಇಲ್ಲಿ

ಕಲಿಸುತ್ತಿದ್ದರು. ಚಿತ್ರಕಲೆ, ಶಿಲ್ಪಶಾಸ್ತ್ರ, ಮಂತ್ರವಿದ್ಯೆಗಳನ್ನು ಕಲಿಯುಲು ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದರು. ಗಣಿತ, ವೇದಾಭ್ಯಾಸವೂ ಇಲ್ಲಿ ನಡೆಯುತ್ತಿತ್ತು. ನ್ಯಾಯಶಾಸ್ತ್ರ ಮತ್ತು ವೈದ್ಯಕೀಯ ವಿದ್ಯೆಗೂ ಇಲ್ಲಿ ಮಹತ್ವ ಕೊಡಲಾಗಿತ್ತು. ಮಗಧ ದೇಶವು ಪ್ರಾಚೀನ ಕಾಲದಿಂದಲೂ ಶಿಲ್ಪಕಲೆಗೆ ಹೆಸರುವಾಸಿಯಾದದ್ದು. ನಾಲಂದಾ ನಗರವು ಮಗಧ ದೇಶದಲ್ಲಿದೆ. ಅಂದ ಮೇಲೆ ಅಲ್ಲಿ ಶಿಲ್ಪಕಲೆಗೆ ಮಹತ್ವಕೊಟ್ಟದ್ದು ಸಹಜವಾಗಿಯೇ ಇದೆ. ಬೇರೆ ಬೇರೆ ಭಾಷೆಗಳನ್ನು ಕಲಿಸುವ ವ್ಯವಸ್ಥೆಯೂ ಇಲ್ಲಿರಬೇಕು ಇಲ್ಲವಾದರೆ ಚೀನ, ತಿಬೇಟ ಮೊದಲಾದ ದೇಶಗಳಿಂದ ವಿದ್ಯಾರ್ಥಿಗಳು ಬರುವದು ಸಾಧ್ಯವಿರಲಿಲ್ಲ.

ಈ ವಿಶ್ವವಿದ್ಯಾಲಯಕ್ಕೆ ಒಬ್ಬ ಕುಲಪತಿ ಇರುತ್ತಿದ್ದನು. ಅವನಿಗೆ ಸಹಾಯ ಮಾಡಲು ಎರಡು ಮಂಡಲಗಳಿರುತ್ತಿದ್ದವು. ಒಂದು ಮಂಡಲವು ಅಭ್ಯಾಸದ ವಿಷಯದಲ್ಲಿಯೂ ಮತ್ತೊಂದು ಮಂಡಲವು ವಿಶ್ವವಿದ್ಯಾಲಯದ ಆಡಳಿತದಲ್ಲಿಯೂ ಸಹಾಯ ಮಾಡುತ್ತಿತ್ತು.

ಕಾಲಾಂತರದಲ್ಲಿ ಇದರ ಬಳಿಯಲ್ಲಿ ವಿಕ್ರಮಶಿಲಾ ವಿಶ್ವವಿದ್ಯಾಲಯವು ಸ್ಥಾಪಿಸಲ್ಪಟ್ಟಿತು. ವಿಕ್ರಮಶಿಲಾ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು ಈ ವಿಶ್ವವಿದ್ಯಾಲಯದ ಮೇಲ್ವಿಚಾರಣೆಯನ್ನು ಮಾಡುತ್ತಿದ್ದರು. ಹನ್ನೊಂದನೇ ಶತಮಾನದಿಂದ ಪಾಲ ರಾಜರು ವಿಕ್ರಮಶಿಲಾ ವಿಶ್ವವಿದ್ಯಾಲಯಕ್ಕೆ ಹೆಚ್ಚು ಪ್ರೋತ್ಸಾಹನ ಕೊಡತೊಡಗಿದರು. ಇದರಿಂದ ಈ ವಿಶ್ವವಿದ್ಯಾಲಯದ ಮಹತ್ವವು ಕಡಿಮೆಯಾಗಿರಬಹುದು.

ಹದಿಮೂರನೇಯ ಶತಮಾನದಲ್ಲಿ ಬಖ್ತಿಯಾರ ಖಿಲಜಿಯು ಈ ವಿಶ್ವವಿದ್ಯಾಲಯುವನ್ನು ನಾಶಮಾಡಿದನು. ಇಲ್ಲಿಯು ಭಿಕ್ಷುಗಳು ಅವನ ಸೈನಿಕರಿಂದ ಕೊಲೆ ಮಾಡಲ್ಪಟ್ಟರು. ಪ್ರಸಿದ್ಧ ಗ್ರಂಥಾಲಯುಗಳು ಭಸ್ಮವಾದವು. ಈ ರೀತಿಯಾಗಿ ಈ ಪ್ರಸಿದ್ಧ ವಿಶ್ವವಿದ್ಯಾಲಯುವು ನಾಶಹೊಂದಿತು. ಅದರ ಅವಶೇಷಗಳು ಮಾತ್ರ ಉಳಿದಿರುವವು.

# ವಿಕ್ರಮಶಿಲಾ

## (೮ ನೇ ಶತಮಾನದಿಂದ ೧೩ ನೇ ಶತಮಾನ)

ನಾಲಂದಾ ವಿಶ್ವವಿದ್ಯಾಲಯದ ಬಳಿಯಲ್ಲಿಯೇ ಈ ವಿಶ್ವವಿದ್ಯಾಲಯವು ಕ್ರಿ. ಶ. ಎಂಟನೇ ಶತಮಾನದಲ್ಲಿ ಸ್ಥಾಪಿಸಲ್ಪಟ್ಟಿತು. ಧರ್ಮಪಾಲ ಎಂಬ ಅರಸನು ಇಲ್ಲಿ ಅನೇಕ ದೇವಾಲಯಗಳನ್ನು ವಿಹಾರಗಳನ್ನು ಕಟ್ಟಿಸಿದನು. ಉದಾರವಾಗಿ ಹಣವನ್ನು ದಾನ ಮಾಡಿದನು. ಅನೇಕ ವಿಸ್ತಾರವಾದ ಕಟ್ಟಡಗಳನ್ನು ಕಟ್ಟಿಸಿದನು. ಇವನ ತರುವಾಯ ಬಂದ ಅರಸರೂ ಕೂಡ ಉದಾರವಾಗಿ ದಾನ ಮಾಡಿದರು. ಇಲ್ಲಿಯ ಭಿಕ್ಷುಗಳು ಹೆಸರುವಾಸಿಯಾದ ವಿದ್ವಾಂಸರಾಗಿದ್ದರು. ಆದ್ದರಿಂದ ಅಲ್ಪಕಾಲದಲ್ಲಿಯೇ ಈ ವಿಶ್ವವಿದ್ಯಾಲಯದ ಕೀರ್ತಿಯು ಪರದೇಶಗಳಲ್ಲಿಯೂ ಹರಡಿತು. ಟಿಬೇಟದಿಂದ ಅನೇಕ ವಿದ್ಯಾರ್ಥಿಗಳು ಇಲ್ಲಿಗೆ ಕಲಿಯಲು ಬರುತ್ತಿದ್ದರು. ಇಲ್ಲಿಯ ವಿದ್ವಾಂಸರು ಟಿಬೇಟಿಗೆ ಬೌದ್ಧ ಧರ್ಮದ ತತ್ತ್ವಗಳನ್ನು ತಿಳಿಸಲು ಹೋಗುತ್ತಿದ್ದರು. ಹೀಗೆ ನಾಲ್ಕು ನೂರು ವರ್ಷಗಳವರೆಗೆ ಟಿಬೇಟ ಮತ್ತು ಈ ವಿಶ್ವವಿದ್ಯಾಲಯದ ಸಂಬಂಧವು ಬೆಳೆದು ಬಂದಿತ್ತು. ಇಲ್ಲಿಯ ಜ್ಞಾನಪದ, ವೈರೋಚನ. ರಕ್ಷಿತ, ಜಟಾರಿ, ರತ್ನಾಕರ ಶಾಂತಿ, ರತ್ನವಜ್ರ, ಜ್ಞಾನಶ್ರೀ ಮಿತ್ರ ಮುಂತಾದ ವಿದ್ವಾಂಸರ ಹೆಸರು ಲೋಕವಿಖ್ಯಾತವಾಗಿವೆ. ಹನ್ನೊಂದನೆ ಶತಮಾನದಲ್ಲಿ ಇಲ್ಲಿಯ ದೀಪಂಕರ ಎಂಬವನು

ುಖ್ಯ ಭಿಕ್ಷುವಾಗಿದ್ದನು. ಇವನನ್ನು ಅಲ್ಕೇಶ ಎಂದು ಕರೆ
ುತ್ತಿದ್ದರು. ವಿಕ್ರಮಶಿಲಾ ಎಂದರೆ ಅಲ್ಕೇಶ ಎಂದು ಹೇಳ
ಹುದು. ಮುಂದೆ ಇವನ ಮತ್ತು ನಾಗಾರ್ಜುನನ ಚಿತ್ರ
ನ್ನು ಪ್ರವೇಶ ದ್ವಾರದಲ್ಲಿ ಕೆತ್ತಲಾಯಿತು. ತಿಬೇಟದಲ್ಲಿ
ಿದ್ದ ಧರ್ಮದ ತತ್ತ್ವಗಳನ್ನು ತಿಳಿಸಿ ಹೇಳುವದಕ್ಕಾಗಿ ಅವ
ನ್ನು ಅಲ್ಲಿಗೆ ಕರೆಯಲಾಯಿತು. ಅಲ್ಕೇಶನು ಅಲ್ಲಿಗೆ ಹೋಗಿ
ಿದ್ಧ ಧರ್ಮದ ತತ್ತ್ವಗಳನ್ನು ಅಲ್ಲಿಯ ಜನರಿಗೆ ತಿಳಿಯಪಡಿಸಿ
ನು ಹಾಗೂ ಅವನು ಅಲ್ಲಿಯೇ ಮರಣಹೊಂದಿದನು. ಅವನು
ಸ್ಕೃತದಲ್ಲಿ ೨೦೦ ಗ್ರಂಥಗಳನ್ನು ಬರೆದಿರುವನೆಂದು ನಂಬಲಾಗಿದೆ.

ವಿಕ್ರಮಶಿಲಾ ಮತ್ತು ನಾಲಂದಾ ವಿಶ್ವವಿದ್ಯಾಲಯಗಳಲ್ಲಿ
ಂದು ಅಂತರವನ್ನು ಕಾಣಬಹುದು. ಈ ವಿಶ್ವವಿದ್ಯಾಲಯ
ಲ್ಲಿ ಅಭ್ಯಾಸವನ್ನು ಮುಗಿಸಿದ ಬಳಿಕ ಪದವಿಯನ್ನು ಕೊಡು
ದ್ದರು. ಹಾಗೂ ಅಭ್ಯಾಸ ಮುಗಿದ ಬಳಿಕ ಪದವೀದಾನ
ಸಮಾರಂಭವು ನಡೆಯುತ್ತಿತ್ತು. ಆಗ ರಾಜನು ಪದವಿಯನ್ನು
ಯಪಾಲಿಸುತ್ತಿದ್ದನು. ವಿಕ್ರಮಶಿಲಾ ವಿಶ್ವವಿದ್ಯಾಲಯದಲ್ಲಿ
ಂಡಿತ' ಪದವಿಯನ್ನು ದಯಪಾಲಿಸುತ್ತಿದ್ದರು.

ಹನ್ನೆರಡನೇ ಶತಮಾನದಲ್ಲಿ ಈ ವಿಶ್ವವಿದ್ಯಾಲಯದಲ್ಲಿ
ಮೂರು ಸಾವಿರ ಭಿಕ್ಷುಗಳು ಅಭ್ಯಾಸಮಾಡುತ್ತಿದ್ದರು. ವಿಶ್ವ
ದ್ಯಾಲಯದಲ್ಲಿ ಗ್ರಂಥಭಂಡಾರವೂ ಇತ್ತು.

ಆರು ಜನ ದ್ವಾರ ಪಂಡಿತರು ಕುಲಪತಿಗೆ ವಿಶ್ವವಿದ್ಯಾ
ದ ಆಡಳಿತದಲ್ಲಿ ಸಹಾಯಮಾಡುತ್ತಿದ್ದರು.

ವ್ಯಾಕರಣ, ತರ್ಕಶಾಸ್ತ್ರ, ತತ್ತ್ವಜ್ಞಾನ, ತಂತ್ರಜ್ಞಾನ, ಈ ವಿಷಯಗಳನ್ನು ಇಲ್ಲಿ ಕಲಿಸುತ್ತಿದ್ದರು. ನಾಲಂದಾ ವಿಶ್ವವಿದ್ಯಾಲಯದ ವೈವಿಧ್ಯವು ಇಲ್ಲಿ ಕಂಡುಬರುವದಿಲ್ಲ. ಆದರೂ ಈ ವಿಶ್ವವಿದ್ಯಾಲಯದಲ್ಲಿ ಬೇರೆ ಬೇರೆ ವಿಷಯಗಳಲ್ಲಿ ಪದವಿಗಳನ್ನು ಕೊಡುತ್ತಿದ್ದುದರಿಂದ ಇಲ್ಲಿಯ ವಿದ್ಯಾಭ್ಯಾಸವು ಕ್ರಮಬದ್ಧವಾಗಿರುವಂತೆ ತೋರುತ್ತದೆ. ಆ ಕಾಲದಲ್ಲಿ ಬೇರೆ ವಿಶ್ವವಿದ್ಯಾಲಯಗಳಲ್ಲಿ ಯಾವದೇ ತರದ ಪದವಿಗಳನ್ನು ಕೊಡುವ ಕ್ರಮವಿರಲಿಲ್ಲ.

೧೨೦೩ರಲ್ಲಿ ಬಖ್ತಿಯಾರ ಖಿಲಜಿಯು ಇದನ್ನು ನಾಶಮಾಡಿದನು. ಈ ವಿಶ್ವವಿದ್ಯಾಲಯವನ್ನು ಅವನು ಕೋಟೆಯೆಂದು ಭಾವಿಸಿದಂತೆ ತೋರುವದು. ಇಲ್ಲಿಯ ಕಟ್ಟಡಗಳನ್ನು ನಾಶಮಾಡಿ ಇಲ್ಲಿಯ ವಿದ್ಯಾರ್ಥಿಗಳನ್ನು ಕೊಲ್ಲಲಾಯಿತು. ವಾಚನಾಲಯದಲ್ಲಿಯ ಗ್ರಂಥಗಳು ಅಗ್ನಿಗೆ ಆಹುತಿಯಾದವು.

## ವಲ್ಲಭ

ಕಾಠೆವಾಡದಲ್ಲಿ ಈ ನಗರವು ಮೈತ್ರಿಕ ಅರಸರ ರಾಜಧಾನಿಯಾಗಿತ್ತು, ಪರದೇಶಗಳ ಸಂಗಡ ವ್ಯಾಪಾರದ ನಗರವೂ ಎಂದು ಹೆಸರಾಗಿತ್ತು. ಏಳನೇ ಶತಮಾನದಲ್ಲಿ ಇದು ವಿದ್ಯೆಯ ಕೇಂದ್ರವೆಂದು ಹೆಸರಾಗಿತ್ತು. ಅಲ್ಲಿ ಆಗ ಬೌದ್ಧರ ನೂರು ವಿಹಾರಗಳಿದ್ದವು. ಈ ವಿಹಾರಗಳಲ್ಲಿ ಆರು ಸಾವಿರ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದರು. ನಾಲಂದಾ ವಿಶ್ವವಿದ್ಯಾಲಯದಂ
ಇಲ್ಲಿ ಹಿಂದುಗಳೂ ತಮ್ಮ ಧರ್ಮಶಾಸ್ತ್ರವನ್ನು ಅಭ್ಯಾಸಮಾಡು

ರುತ್ತಿದ್ದರು. ಈ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು
ರಕಾರದ ಉನ್ನತ ಹುದ್ದೆಗಳಿಗೆ ನೇಮಿಸಲ್ಪಡುತ್ತಿದ್ದರು. ಇದರ
ಮೇಲಿಂದ ಇಲ್ಲಿ ವ್ಯವಹಾರಿಕವಾದ ಅನೇಕ ವಿಷಯಗಳನ್ನು
ಲಿಸುತ್ತಿದ್ದಂತೆ ತೋರುತ್ತದೆ. ಭಾರತದ ಬೇರೆ ಬೇರೆ ಭಾಗ
ಳಿಂದ ವಿದ್ವಾಂಸರು ಇಲ್ಲಿ ಬಂದು ಎರಡು ಮೂರು ವರ್ಷಗಳ
ರೆಗೆ ನಿಲ್ಲುತ್ತಿದ್ದರು. ಮತ್ತು ತಮ್ಮ ಜ್ಞಾನದ ಪರೀಕ್ಷೆಯನ್ನು
ಮಾಡುತ್ತಿದ್ದರು. ಈ ವಿಶ್ವವಿದ್ಯಾಲಯದಲ್ಲಿಯ ವಿದ್ವಾಂಸರು
ವರ ಸಂಶಯಗಳನ್ನು ನಿವಾರಿಸುತ್ತಿದ್ದರು. ನಾಲಂದಾ ವಿಶ್ವ
ದ್ಯಾಲಯದಂತೆ ಇಲ್ಲಿಯ ವಿದ್ವಾಂಸರ ಹೆಸರುಗಳನ್ನು ಪ್ರವೇಶ
ದ್ವಾರದಲ್ಲಿ ಬರೆಯುತ್ತಿದ್ದರು. ಈ ವಿಶ್ವವಿದ್ಯಾಲಯದಲ್ಲಿ ಸ್ಥಿರ
ಮತಿ ಮತ್ತು ಗುಣಮತಿ ಎಂಬ ವಿದ್ವಾಂಸರು ವಿಹಾರಗಳ ಕುಲ
ಪತಿಗಳಾಗಿದ್ದರು. ಇಲ್ಲಿ ಶಿಕ್ಷಣವನ್ನು ಪಡೆದ ಬಳಿಕ ವಿದ್ಯಾರ್ಥಿ
ಳು ರಾಜರ ಆಸ್ಥಾನದಲ್ಲಿ ಹೋಗಿ ತಮ್ಮ ಯೋಗ್ಯತೆಯನ್ನು
ತೋರಿಸಬೇಕಾಗುತ್ತಿತ್ತು. ನಾಲಂದಾ ವಿಶ್ವವಿದ್ಯಾಲಯದಲ್ಲಿ
ಮಹಾಯಾನ ಪಂಥದ ಅಭ್ಯಾಸವು ವಿಶೇಷವಾಗಿದ್ದರೆ ಇಲ್ಲಿ
ನಯಾನ ಪಂಥದ ಅಭ್ಯಾಸವು ವಿಶೇಷವಾಗಿ ನಡೆಯುತ್ತಿತ್ತು.
ಾಸರಿತ್‌ಸಾಗರದಲ್ಲಿ ಈ ವಿಶ್ವವಿದ್ಯಾಲಯದ ಉಲ್ಲೇಖವಿರು
ರು. ವಸುದತ್ತ ಎಂಬವನು ತನ್ನ ಮಗನನ್ನು ವಲ್ಲಭಿ ವಿಶ್ವ
ದ್ಯಾಲಯಕ್ಕೆ ಅಭ್ಯಾಸಮಾಡಲು ಕಳಿಸುವನು. ಅವನು
ತ್ತರ ಪ್ರದೇಶದಿಂದ ಇಲ್ಲಿಗೆ ಅಭ್ಯಾಸಕ್ಕಾಗಿ ಬರುವನು,
ರಣಾಸಿ ಅಥವಾ ನಾಲಂದಾ ವಿಶ್ವವಿದ್ಯಾಲಯಕ್ಕೆ ಹೋಗದೆ
ಗೆ ಬರಬೇಕಾದರೆ ಆ ಕಾಲದಲ್ಲಿ ಇದು ಬಹಳ ಪ್ರಖ್ಯಾತ

ವಿಶ್ವವಿದ್ಯಾಲಯವಾಗಿರಬೇಕು. ಇಲ್ಲವಾದರೆ ಸಮೀಪದಲ್ಲಿಯ ವಿಶ್ವವಿದ್ಯಾಲಯವನ್ನು ಬಿಟ್ಟು ಇಷ್ಟು ದೂರ ಬರುವದರ ಆಗತ್ಯ ವಾದರೂ ಏನು ?

ವಲ್ಲಬಿ ನಗರವು ಶ್ರೀಮಂತರಾದ ವರ್ತಕರಿಂದ ತುಂಬಿತ್ತು. ಇಲ್ಲಿಯ ನೂರು ಜನ ವರ್ತಕರು ಹತ್ತು ಲಕ್ಷಕ್ಕಿಂತಲೂ ಹೆಚ್ಚು ಧನವನ್ನು ಪಡೆದಿದ್ದರು. ಈ ಶ್ರೀಮಂತರಾದ ವರ್ತಕರು ಈ ವಿಶ್ವವಿದ್ಯಾಲಯಕ್ಕೆ ಉದಾರವಾಗಿ ದಾನಮಾಡುತ್ತಿದ್ದರು. ಇಲ್ಲಿ ರಾಜ್ಯವಾಳುತ್ತಿದ್ದ ಮೈತ್ರಕ ಅರಸರೂ ವಿದ್ಯಾಪಕ್ಷಪಾತಿಗಳಾಗಿ ದ್ದರು. ಅವರು ಈ ವಿಶ್ವವಿದ್ಯಾಲಯದ ವೆಚ್ಚಕ್ಕಾಗಿಯೂ ಗ್ರಂಥಾಲಯಗಳಿಗೂ ಉದಾರವಾಗಿ ದಾನಮಾಡುತ್ತಿದ್ದರು. ಹನ್ನೆರಡನೇ ಶತಮಾನದ ವರೆಗೆ ಈ ವಿಶ್ವವಿದ್ಯಾಲಯವು ಪ್ರಸಿದ್ಧ ವಾಗಿತ್ತು.

## ಉದಂತಪುರಿ

ಬಂಗಾಲದ ಪಾಲ ರಾಜರು ಈ ವಿದ್ಯಾಲಯವನ್ನು ಸ್ಥಾಪಿಸಿದರು. ಈ ರಾಜರು ಕ್ಷತ್ರಿಯರು. ಆದರೂ ಈ ಬೌ[illegible] ವಿದ್ಯಾಲಯಕ್ಕೆ ಅವರು ಸಹಾಯ ಮಾಡಿದರು. ಪ್ರಾಚೀ[illegible] ಕಾಲದಲ್ಲಿ ಅನೇಕ ಹಿಂದೂ ರಾಜರು ಬೌದ್ಧ ವಿಶ್ವವಿದ್ಯಾಲಯಗಳಿ[illegible] ಸಹಾಯ ಮಾಡಿರುವ ಅನೇಕ ಉದಾಹರಣೆಗಳನ್ನು ಕಾಣಬಹು[illegible] ಪಾಲರಾಜರು ಎಂಟನೇ ಶತಮಾನದಿಂದ ೧೧ನೇ ಶತಮಾ[illegible] ವರೆಗೆ ಅತ್ಯಂತ ಪ್ರಬಲರಾಗಿದ್ದರು. ಆ ಕಾಲದಲ್ಲಿಯೇ

ವಿದ್ಯಾಲಯವು ಪ್ರಸಿದ್ಧಿಯನ್ನು ಪಡೆಯಿತು. ಉದಂತಪುರಿಯು ಪಾಲೀ ಭಾಷೆಯ ಕೇಂದ್ರವಾಗಿತ್ತು.

ಮಹೀಪಾಲ ಎಂಬ ದೊರೆಯ ಕಾಲದಲ್ಲಿ ಈ ವಿಶ್ವವಿದ್ಯಾಲಯದಲ್ಲಿ ಆರು ಸಾವಿರ ವಿದ್ಯಾರ್ಥಿಗಳಿದ್ದರು. ಇವನ ಕಾಲ ೯೭೭ ರಿಂದ ೧೦೨೭ರವರೆಗೆ ಅಲೇಶ ಎಂಬವನು ೧೯ ವರ್ಷಗಳ ವರೆಗೆ ಅಭ್ಯಾಸಮಾಡಿ ಜನಪ್ರಸಿದ್ಧ ವಿದ್ವಾಂಸನಾದನು.

ಇಲ್ಲಿಯ ಗ್ರಂಥಾಲಯವು ಪ್ರಸಿದ್ಧಿಯನ್ನು ಪಡೆದಿತ್ತು. ಬಖ್ತಿಯಾರ ಖಿಲಜಿಯು ಇಲ್ಲಿಯ ಗ್ರಂಥಾಲಯವನ್ನು ನಾಶ ಮಾಡಿದನು.

## ಕಾಂಚಿ

ಹಿಂದುಗಳಿಗೆ ಏಳು ನಗರಗಳು ಮೋಕ್ಷದಾಯಕವೆಂದು ಹೇಳಲಾಗಿದೆ. ಅದರಲ್ಲಿ ಕಾಂಚಿ ನಗರವೂ ಒಂದು. ಈ ನಗರದ ಉಲ್ಲೇಖವು ಅತಿ ಪ್ರಾಚೀನ ಕಾಲದಿಂದಲೂ ದೊರೆಯುವದು. ಕ್ರಿ. ಶ. ಪೂರ್ವ ಮೂರನೇ ಶತಮಾನದಲ್ಲಿ ರಚಿತವಾದ ಪತಂಜಲಿಯ ಮಹಾಭಾಷ್ಯದಲ್ಲಿ ಈ ನಗರದ ಉಲ್ಲೇಖ ಬಂದಿದೆ. ತಮಿಳು ಮಹಾಕಾವ್ಯ 'ಮಣಿ ಮೇಖಲಾಯಿ'ದಲ್ಲಿಯೂ ಈ ಪಟ್ಟಣದ ಉಲ್ಲೇಖವಿರುವದು. ಚೀನೀ ಪ್ರವಾಸಿ ಹ್ಯುಯೆನಸಾಂಗನು ಈ ನಗರವನ್ನು ಸ್ಮರಿಸಿರುವನು. ಕ್ರಿ. ಶ. ೧ನೇ ಶತಮಾನದಿಂದ ಹದಿಮೂರನೇ ಶತಮಾನದ ವರೆಗೆ ಈ ನಗರವು ಜೈನ ಮತ್ತು ಬೌದ್ಧ ಧರ್ಮಗಳ ಕೇಂದ್ರವಾಗಿತ್ತು. ಜೈನ ಮತ್ತು ಬೌದ್ಧ ಧರ್ಮಗಳು ಪ್ರಸಾರವಾಗುವದಕ್ಕಿಂತಲೂ

ಮೊದಲು ಇಲ್ಲಿ ವೈದಿಕ ವಿದ್ಯಾಪೀಠವಿತ್ತು. ಇದಕ್ಕೆ ಘಟಿಕಾ ಎಂದು ಕರೆಯುತ್ತಿದ್ದರು. ಇಲ್ಲಿ ವಿದ್ವಾಂಸನಾದ ಗುರುವು ಶಿಷ್ಯರಿಗೆ ಪಾಠವನ್ನು ಹೇಳಿಕೊಡುತ್ತಿದ್ದನು. ಇಂಥ ಗುರುವಿಗೆ ರಾಜನಿಂದ ಭೂಮಿಯು ದಾನವಾಗಿ ದೊರೆಯುತ್ತಿತ್ತು. ಈ ಭೂಮಿಗೆ ಕಂದಾಯವನ್ನು ಕೊಡುವ ಕಾರಣವಿರಲಿಲ್ಲ. ಇಂಥ ವೈದಿಕ ವಿದ್ಯಾಲಯಗಳು ಹಿಂದುಸ್ತಾನದ ತುಂಬ ಇದ್ದವು. ಇಂಥ ಘಟಿಕಾಗಳ ಬಗ್ಗೆ ಕಾಕುಸ್ಥವರ್ಮನ ತಾಳಗುಂದದಲ್ಲಿರುವ ಕಂಬದಲ್ಲಿರುವ ಲೇಖನದಲ್ಲಿ ಮೊದಲನೇ ಸಾರೆ ಉಲ್ಲೇಖಿಸಲಾಗಿ ಗಿದೆ. ಕದಂಬ ಕುಲದ ಮೂಲಪುರುಷನಾದ ಮಯೂರಶರ್ಮನು ಕಾಂಚಿಯಲ್ಲಿರುವ ಘಟಿಕಾಕ್ಕೆ ವೇದಾಧ್ಯಯನ ಮಾಡಲು ಹೋದ ನೆಂದು ಅದರಲ್ಲಿ ಉಲ್ಲೇಖಿಸಲಾಗಿದೆ.

## ದಕ್ಷಿಣ ಹಿಂದುಸ್ಥಾನದಲ್ಲಿಯ ದೇವಾಲಯ ವಿದ್ಯಾಮಂದಿರಗಳು ಸಾಲೊಟಗಿ

ಬೌದ್ಧರ ವಿಹಾರಗಳು ಉತ್ತರದಲ್ಲಿ ವಿದ್ಯಾಕೇಂದ್ರಗಳಾಗಿ ದ್ದಂತೆ ದಕ್ಷಿಣ ಹಿಂದುಸ್ತಾನದಲ್ಲಿ ದೇವಾಲಯಗಳು ವಿದ್ಯಾ ಕೇಂದ್ರಗಳಾಗಿದ್ದವು. ಕರ್ನಾಟಕದಲ್ಲಿ ವಿಜಾಪೂರ ಜಿಲ್ಲೆಯ ಸಾಲೊಟಗಿ ಗ್ರಾಮವು ಹತ್ತು ಮತ್ತು ಹನ್ನೊಂದನೇ ಶತಮಾನ ದಲ್ಲಿ ವೇದ ವಿದ್ಯೆಯ ಕೇಂದ್ರವಾಗಿತ್ತು. ಇಲ್ಲಿಯ ವಿದ್ಯಾ ಮಂದಿರವು 'ತ್ರಯಿಪುರುಷ' ಎಂಬ ದೇವಾಲಯದಲ್ಲಿ ಇತ್ತು. ಈ ದೇವಾಲಯವನ್ನು ರಾಷ್ಟ್ರಕೂಟ ಅರಸನಾದ ಮೂರನೇ ಕೃಷ್ಣನ ಮಂತ್ರಿಯಾದ ನಾರಾಯಣನು ಕಟ್ಟಿಸಿದನು. ವಿದ್ಯಾರ್ಥಿ

ಗಳು ವಾಸ ಮಾಡುವದಕ್ಕೆ ೨೭ ಮನೆಗಳನ್ನು ಕಟ್ಟಿದ್ದರು. ದೀಪದ ವ್ಯವಸ್ಥೆಗೆಂದು ಅರವತ್ತು ಎಕರೆ ಭೂಮಿ ಯನ್ನು ದಾನವಾಗಿ ಕೊಡಲಾಗಿತ್ತು. ಇಲ್ಲಿ ಸುಮಾರು ೨೦೦ ವಿದ್ಯಾರ್ಥಿಗಳು ಇದ್ದರೆಂದು ಕಂಡುಬರುವದು.

## ಬೇರೆ ಕೆಲವು ದೇವಾಲಯ ವಿದ್ಯಾಮಂದಿರಗಳು

ದಕ್ಷಿಣ ಅರ್ಕಾಟ್ ಜಿಲ್ಲೆಯಲ್ಲಿರುವ ಎಣ್ಣಾಯಿರಮ್ ವಿದ್ಯಾ ಮಂದಿರವು ಹನ್ನೊಂದನೇ ಶತಮಾನದಲ್ಲಿ ಪ್ರಖ್ಯಾತ ವಿದ್ಯಾ ಕೇಂದ್ರವಾಗಿತ್ತು. ಇಲ್ಲಿ ಹದಿನಾರು ಶಿಕ್ಷಕರು ಮತ್ತು ೩೪೦ ವಿದ್ಯಾರ್ಥಿಗಳಿದ್ದರು.

ಚೆಂಗಾಲಪೇಟ ಜಿಲ್ಲೆಯ ತಿರಮುಕೂಟಲ ವಿದ್ಯಾಮಂದಿರ ದಲ್ಲಿ ಅರವತ್ತು ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದರು. ಇಲ್ಲಿ ಆಸ್ಪತ್ರೆ, ವಿದ್ಯಾಮಂದಿರ ಮತ್ತು ವಿದ್ಯಾರ್ಥಿಗಳಿಗೆ ವಾಸ ಮಾಡಲು ಮನೆ ಇತ್ತು. ಈ ಜಿಲ್ಲೆಯಲ್ಲಿ ಇಂಥ ಅನೇಕ ವಿದ್ಯಾಲಯಗಳಿದ್ದವು. ತಿರುವೊರಿಯೂರ ವಿದ್ಯಾಮಂದಿರದಲ್ಲಿ ವ್ಯಾಕರಣವನ್ನು ಕಲಿಸಲು ವಿಶೇಷ ವ್ಯವಸ್ಥೆಯನ್ನು ಮಾಡಿದ್ದರು. ಈ ವಿದ್ಯಾಲಯಕ್ಕೆ ೪೦೦ ಎಕರೆ ಭೂಮಿಯು ಉಂಬಳಿಯಾಗಿ ದೊರೆತಿತ್ತು. ಒಂದು ನೂರು ವರ್ಷಗಳವರೆಗೆ ಈ ವಿದ್ಯಾ ಮಂದಿರವು ವಿದ್ಯಾದಾನ ಕಾರ್ಯದಲ್ಲಿ ನಿರತವಾಗಿತ್ತು. ಮಲ್ಕಾ ಪುರಮ್‌ದಲ್ಲಿ ದೇವಾಲಯ, ವಿದ್ಯಾಲಯ, ಭೋಜನಾಲಯ ಮತ್ತು ಆಸ್ಪತ್ರೆ ಕೂಡಿಯೇ ಇದ್ದವು. ಈ ವಿದ್ಯಾಲಯದಲ್ಲಿ

ಎಂಟು ಜನ ಶಿಕ್ಷಕರಿದ್ದರು. ಇಲ್ಲಿಯ ವಿದ್ಯಾರ್ಥಿಗಳ ಊಟ, ವಸತಿ ಮತ್ತು ಶಿಕ್ಷಣ ಇವುಗಳ ವೆಚ್ಚವನ್ನು ವಿದ್ಯಾಲಯವೇ ನೋಡಿಕೊಳ್ಳುತ್ತಿತ್ತು.

ದಕ್ಷಿಣ ಹಿಂದುಸ್ತಾನದಲ್ಲಿ ದೇವಾಲಯಗಳಲ್ಲಿ ವಿದ್ಯಾ ಮಂದಿರಗಳು ಇರುತ್ತಿದ್ದವು. ಧಾರವಾಡ ಜಿಲ್ಲೆಯಲ್ಲಿಯ ಹೆಬ್ಬಾಳದಲ್ಲಿ ಒಂದು ಮಠವಿತ್ತು. ಈ ಮಠಕ್ಕೆ ವಿದ್ಯಾರ್ಥಿ ಗಳಿಗೆ ವಿದ್ಯೆಯನ್ನು ಹೇಳಿಕೊಡುವದಕ್ಕಾಗಿ ೨೦೦ ಗ್ರಾಮಗಳನ್ನು ದಾನವಾಗಿ ಕೊಡಲಾಗಿತ್ತು. ವಿಜಾಪುರದಲ್ಲಿಯ ದೇವಾಲಯಕ್ಕೆ ೧೨೦೦ ಎಕರೆ ಭೂಮಿಯನ್ನು ದಾನವಾಗಿ ಕೊಡಲಾಗಿತ್ತು. ಈ ದೇವಾಲಯಕ್ಕೆ ದೊರೆತ ದಾನದಿಂದ ಇಲ್ಲಿಯ ವಿದ್ಯಾರ್ಥಿಗಳ ಸಂಖ್ಯೆಯು ಸಾಕಷ್ಟಿರಬಹುದೆಂದು ತೋರುತ್ತದೆ. ಬಿಜಾಪುರ ಜಿಲ್ಲೆಯಲ್ಲಿಯ ಮನಗೂಳಿಯಲ್ಲಿಯೂ ಒಂದು ದೇವಾಲಯದಲ್ಲಿ ವಿದ್ಯಾಮಂದಿರವಿತ್ತು. ಇಲ್ಲಿ ವ್ಯಾಕರಣವನ್ನು ಬೋಧಿಸುವ ವ್ಯವಸ್ಥೆ ಇತ್ತು. ಈ ದೇವಾಲಯಕ್ಕೆ ೨೦ ಎಕರೆ ಭೂಮಿಯು ದತ್ತಿಯಾಗಿ ದೊರೆತಿತ್ತು. ಬಳ್ಳಿಗಾವಿಯಲ್ಲಿ ವಿದ್ಯಾರ್ಥಿಗಳಿಗೆ ಉಚಿತವಾದ ಶಿಕ್ಷಣವೂ, ಊಟದ ವ್ಯವಸ್ಥೆಯೂ ಮಾಡಲ್ಪಟ್ಟಿತ್ತು. ಶಿವಮೊಗ್ಗಾ ಜಿಲ್ಲೆಯ ತಾಳಗುಂದದಲ್ಲಿ ಒಂದು ಸಂಸ್ಕೃತ ವಿದ್ಯಾ ಲಯವು ಇದ್ದ ಸಂಗತಿಯು ತಿಳಿದುಬರುತ್ತದೆ. ಇಲ್ಲಿ ೪೮ ವಿದ್ಯಾರ್ಥಿಗಳಿಗೆ ಊಟವು ಪುಕ್ಕಟೆಯಾಗಿ ದೊರೆಯುತ್ತಿತ್ತು. ಈ ವಿದ್ಯಾರ್ಥಿಗಳು ಋಗ್ವೇದ, ಯಜುರ್ವೇದ, ಸಾಮವೇದ ಗಳನ್ನು ಅಭ್ಯಾಸ ಮಾಡುತ್ತಿದ್ದರು. ವಿಶೇಷವೆಂದರೆ ಭಾಷಾ

ಶಾಸ್ತ್ರ ಮತ್ತು ಕನ್ನಡವನ್ನು ಈ ವಿದ್ಯಾಮಂದಿರದಲ್ಲಿ ಕಲಿಸುತ್ತಿದ್ದರು.

ತಮಿಳು ನಾಡಿನಲ್ಲಿ ದೇವಾಲಯಗಳಿಗೆ ವಿದ್ಯಾಮಂದಿರಗಳನ್ನು ನಡಿಸುವದರ ಸಲುವಾಗಿ ಅನೇಕ ದಾನಗಳನ್ನು ಕೊಟ್ಟ ಉದಾಹರಣೆಗಳು ಶಿಲಾಶಾಸನಗಳಲ್ಲಿ ಉಕ್ತವಾಗಿರುವವು. ದಕ್ಷಿಣ ಹಿಂದುಸ್ತಾನದಲ್ಲಿರುವ ಅನೇಕ ದೇವಾಲಯದಲ್ಲಿಯೂ ಸಂಸ್ಕೃತ ವಿದ್ಯಾಲಯಗಳಿದ್ದವು.

ನಮಗೆ ದೊರೆತ ದೇವಾಲಯಗಳಲ್ಲಿ ನಡೆಯುತ್ತಿದ್ದ ವಿದ್ಯಾಲಯಗಳೆಲ್ಲವೂ ದಕ್ಷಿಣ ಹಿಂದುಸ್ತಾನದಲ್ಲಿಯವು. ಉತ್ತರ ಹಿಂದುಸ್ತಾನದಲ್ಲಿಯೂ ಈ ಪ್ರಕಾರದ ವಿದ್ಯಾಲಯಗಳು ಇರಲಿಲ್ಲವೆಂದು ತಿಳಿಯುವದು ಯೋಗ್ಯವಾಗಲಾರದು. ಮುಸಲ್ಮಾನರ ಆಳಿಕೆಯಲ್ಲಿ ಅನೇಕ ದೇವಾಲಯಗಳು ನಾಶವಾದ್ದರಿಂದ ಈ ದೇವಾಲಯಗಳಲ್ಲಿಯ ವಿದ್ಯಾಮಂದಿರಗಳ ಬಗ್ಗೆ ಹೆಚ್ಚಿನ ಸಂಗತಿಗಳು ನಮಗೆ ಗೊತ್ತಾಗುವದಿಲ್ಲ. ವಾರಣಾಸಿ, ಮುಲ್ತಾನ ಮತ್ತು ಸಿಂಧ ಪ್ರಾಂತದಲ್ಲಿಯ ದೇವಾಲಯಗಳು ಹಿಂದು ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಕೊಡುತ್ತಿದ್ದವು. ಆದ್ದರಿಂದಲೇ ಔರಂಗಜೇಬನು ಈ ದೇವಾಲಯಗಳನ್ನು ನಾಶಮಾಡಿದನು.

## ಅಗ್ರಹಾರಗಳು

ಅರಸರು ಪಂಡಿತರಾದ ಬ್ರಾಹ್ಮಣರಿಗೆ ನೆಲಸಲು ಹಳ್ಳಿಗಳನ್ನು ದಾನವಾಗಿ ಕೊಡುತ್ತಿದ್ದರು. ಇವೇ ಅಗ್ರಹಾರಗಳು.

ಬ್ರಾಹ್ಮಣರು ಈ ಅಗ್ರಹಾರಗಳಲ್ಲಿ ನೆಲಸಿ ವಿದ್ಯಾದಾನ ಕಾರ್ಯದಲ್ಲಿ ನಿರತರಾಗಿರುತ್ತಿದ್ದರು. ಈ ಅಗ್ರಹಾರಗಳಲ್ಲಿ ಉಚಿತವಾಗಿ ಶಿಕ್ಷಣವು ದೊರೆಯುತ್ತಿತ್ತು.

ಧಾರವಾಡ ಜಿಲ್ಲೆಯ ಕಳಸ ಗ್ರಾಮವು ಒಂದು ಅಗ್ರಹಾರವಾಗಿತ್ತು. ಈ ಅಗ್ರಹಾರದಲ್ಲಿ ಎರಡು ನೂರು ಬ್ರಾಹ್ಮಣರು ವಾಸವಾಗಿದ್ದರು. ಈ ಅಗ್ರಹಾರವು ವಿದ್ಯೆಯ ಕೇಂದ್ರವೆಂದು ಹೆಸರಾಗಿತ್ತು.

ಹಾಸನ ಜಿಲ್ಲೆಯಲ್ಲಿಯ ಅರಸೀಕೆರೆ ಒಂದು ಅಗ್ರಹಾರವಾಗಿತ್ತು. ಆಗ ಅದನ್ನು ಸರ್ವಜ್ಞಪುರ ಎಂದು ಕರೆಯುತ್ತಿದ್ದರು. ಇಲ್ಲಿಯ ಶಾಸನವು ಈ ರೀತಿ ತಿಳಿಸುತ್ತದೆ "ಬೀದಿಯಲ್ಲಿ ಕುಳಿತುಕೊಂಡು ಬ್ರಾಹ್ಮಣರು ವೇದಗಳನ್ನೂ ಷಡ್‌ದರ್ಶನಗಳನ್ನು ಓದುತ್ತಿದ್ದರು. ಈ ಊರಲ್ಲಿರುವ ಎಲ್ಲ ಬ್ರಾಹ್ಮಣರು ವಿದ್ಯಾದಾನ ಮಾಡುವವರಲ್ಲಿಯೂ ಅಧ್ಯಯನ ಮಾಡುವವರಲ್ಲಿಯೂ ತೊಡಗಿರುತ್ತಿದ್ದರು."

## ಟೋಲ

ಬಂಗಾಲ, ಬಿಹಾರ ಮತ್ತು ಉತ್ತರ ಪ್ರದೇಶಗಳಲ್ಲಿ ಸಂಸ್ಕೃತ ವಿದ್ಯಾಲಯಗಳು ಅಸ್ತಿತ್ವದಲ್ಲಿದ್ದವು. ಇವುಗಳಿಗೆ 'ಟೋಲ' ಎಂದು ಕರೆಯುವರು. ಇವುಗಳಿಗೆ ಭೂಮಿಯನ್ನು ದಾನವಾಗಿ ಕೊಡುತ್ತಿದ್ದರು. ಸಂಸ್ಕೃತ ಪಂಡಿತರು ಉತ್ಸವಗಳಲ್ಲಿ ಜನರಿಂದ ಹಣವನ್ನು ದಾನವಾಗಿ ಪಡೆದು ವಿದ್ಯಾರ್ಥಿಗಳಿಗೆ ಉಚಿತ ಊಟದ ವ್ಯವಸ್ಥೆಯನ್ನು ಮಾಡಿದ ಅನೇಕ ಉದಾಹರಣೆಗಳು ಕಂಡರುಬುವವು. ಯಾರಿಗೆ ಭೂಮಿಯು ದಾನವಾಗಿ

ದೊರೆತಿರಲಿಲ್ಲವೋ ಅಂಥ ವಿದ್ವಾಂಸರು ಮಾತ್ರ ಈ ರೀತಿ ಹಣವನ್ನು ದಾನವಾಗಿ ಪಡೆಯುತ್ತಿದ್ದರು. ಈ ವಿದ್ಯಾಲಯಗಳನ್ನು ನಡಿಸುವದಕ್ಕೆ ಹಣದ ಕೊರತೆಯು ಅವರಿಗೆ ಆಗುತ್ತಿರಲಿಲ್ಲ. ಪಂಡಿತರ ಮನೆಯಲ್ಲಿಯೇ ವರ್ಗಗಳು ನಡೆಯುತ್ತಿರಲಿಲ್ಲ. ಟೋಲಗಳಲ್ಲಿ ಸಾಧಾರಣವಾಗಿ ೨೫ ವಿದ್ಯಾರ್ಥಿಗಳಿರುತ್ತಿದ್ದರು. ಶಾಲೆಯ ಸಮೀಪದಲ್ಲಿಯೇ ಇವರಿಗೆ ವಾಸಮಾಡಲು ಮನೆಯನ್ನು ಕಟ್ಟಲಾಗುತ್ತಿತ್ತು. ಇಲ್ಲಿಯ ವಿದ್ಯಾಭ್ಯಾಸದ ಅವಧಿಯು ಸುಮಾರು ಆರರಿಂದ ಎಂಟು ವರ್ಷಗಳವರೆಗೆ ಇತ್ತು. ಪ್ರವೇಶವು ದೊರೆಯಬೇಕಾದರೆ ಪರೀಕ್ಷೆಯನ್ನು ತೆಗೆದುಕೊಳ್ಳುತ್ತಿದ್ದರು.

ನಮ್ಮ ದೇಶದಲ್ಲಿ ಪರಕೀಯರ ಆಡಳಿತೆಯು ಪ್ರಾರಂಭವಾದಾಗಲೂ ಈ ವಿದ್ಯಾಲಯಗಳು ಜ್ಞಾನದಾನ ಕಾರ್ಯದಲ್ಲಿ ತೊಡಗಿದ್ದವು. ವಿದ್ವಾಂಸರು ಅತ್ಯಂತ ಬಡತನದಲ್ಲಿ ಕಾಲ ಕಳೆಯುತ್ತಿದ್ದರೂ ಅವರು ವಿದ್ಯೆಯನ್ನು ಪುಕ್ಕಟೆಯಾಗಿ ಹೇಳಿ ಕೊಡುತ್ತಿದ್ದರು. ಬ್ರಿಟಿಷರ ಆಳಿಕೆಯಲ್ಲಿ ವಾರಣಾಸಿ, ನಾಸಿಕ, ವಾಯಿ, ಗೋಕರ್ಣ ಮುಂತಾದ ನಗರಗಳಲ್ಲಿ ವಿದ್ವಾಂಸರು ಸಂಸ್ಕೃತವನ್ನು ಪುಕ್ಕಟೆಯಾಗಿ ಹೇಳಿಕೊಡುತ್ತಿದ್ದರು. ನಮ್ಮ ಸಂಸ್ಕೃತಿಯ ವೈಶಿಷ್ಟ್ಯಗಳಲ್ಲಿ ಇದು ಒಂದಾಗಿದೆ. ಬಡ ವಿದ್ಯಾರ್ಥಿಗಳಿಗೆ ಕಲಿಯುವ ಲವಲವಿಕೆ ಇದ್ದರೆ ಹೇಳಿಕೊಡುವ ವಿದ್ವಾಂಸರಿಗೆ ಕೊರತೆ ಇರಲಿಲ್ಲ, ಪ್ರತಿಯೊಂದು ಊರಿನಲ್ಲಿಯೂ ಈ ರೀತಿ ವಿದ್ವಾಂಸರು ವಿದ್ಯಾದಾನ ಮಾಡುವದರಲ್ಲಿ ನಿರತರಾಗಿದ್ದರು. ಅವರು ಹಣದ ಆಸೆಗೆ ಎಂದೂ ಅಪೇಕ್ಷೆಪಟ್ಟವರಲ್ಲ. ಈ ವಿದ್ವಾಂಸರ ಪರಂಪರೆಯು ಇಂದಿಗೂ ನಡೆದು ಬಂದಿರುವದು.

# ಉಪಸಂಹಾರ

ಇಲ್ಲಿಯುವರೆಗೆ ನಾವು ಪ್ರಾಚೀನ ಭಾರತದಲ್ಲಿಯ ವಿದ್ಯಾ ಕೇಂದ್ರಗಳ ಬಗ್ಗೆ ಸಂಕ್ಷಿಪ್ತವಾಗಿ ನಿರೂಪಣೆ ಮಾಡಿದೆವು. ಈ ಪುಟ್ಟ ಪುಸ್ತಕದಲ್ಲಿ ಎಲ್ಲಾ ವಿದ್ಯಾ ಕೇಂದ್ರಗಳ ಬಗ್ಗೆ ಪರಿಚಯು ಮಾಡಿಕೊಡುವದು ಸಾಧ್ಯವಿಲ್ಲ ಆದ್ದರಿಂದ ಸ್ಥೂಲವಾಗಿ ಕೆಲವು ಮಹತ್ವದ ವಿದ್ಯಾ ಕೇಂದ್ರಗಳನ್ನು ಕುರಿತು ಮಾತ್ರ ಪರಿಚಯು ವನ್ನು ಮಾಡಿಕೊಡಲಾಯಿತು. ನಮಗೆ ಪ್ರಾಚೀನ ಕಾಲದ ವಿದ್ಯಾ ಕೇಂದ್ರಗಳನ್ನು ಅರಿತುಕೊಳ್ಳುವ ಅವಶ್ಯಕತೆಯಾದರೂ ಏನು ಎಂದು ಪ್ರಶ್ನಿಸಬಹುದು. ಆದರೆ ಅವುಗಳಿಂದ ಕಲಿಯು ಬೇಕಾದದ್ದು ಸಾಕಷ್ಟು ಇರುವದು. ಇಂದಿನ ಅನೇಕ ಸಮಸ್ಯೆ ಗಳಿಗೆ ಅಲ್ಲಿ ಉತ್ತರವು ದೊರೆಯುಉವದು. ಇಂದು ನಾವು ಎತ್ತ ಸಾಗಿರುವೆವು ಎಂಬುದನ್ನು ಕುರಿತು ವಿಚಾರಮಾಡುವ ಕಾಲವು ಸನ್ನಿಹಿತವಾಗಿದೆ. ಇಂದು ನಮಗೆ ವಿಜ್ಞಾನವು ಅನೇಕ ಅನು ಕೂಲತೆಗಳನ್ನು ಒದಗಿಸಿಕೊಟ್ಟಿರುವದು. ಜಗತ್ತು ಚಿಕ್ಕದಾಗಿದೆ. ಜಗತ್ತಿನಲ್ಲಿ ಆಗುವ ಸಂಗತಿಗಳನ್ನು ಕ್ಷಣಾರ್ಧದಲ್ಲಿ ಅರಿತುಕೊಳ್ಳು ವೆವು. ಲಂಡನ್ ನಗರದಲ್ಲಿ ನಡೆದ ಭಾಷಣವನ್ನು ಕೂಡಲೆ ಕೇಳ ಬಹುದು. ಅಲ್ಪ ಕಾಲದಲ್ಲಿ ಯಾವ ಗ್ರಾಮವೂ ಇಲ್ಲದೆ ಪ್ರವಾಸಮಾಡಬಹುದು. ಎಲ್ಲಕ್ಕೂ ಹೆಚ್ಚಾಗಿ ಮುದ್ರಣಾ ಲಯಗಳು ಬಂದಿರುವದರಿಂದ ಜ್ಞಾನಾಭಿವೃದ್ಧಿಗೆ ಬಹಳ ಸಹಾಯವಾಗಿದೆ. ವೃತ್ತಪತ್ರಿಕೆಗಳೂ, ಗ್ರಂಥಗಳೂ ಅಸಂ- ಖ್ಯಾತವಾಗಿ ಪ್ರಕಟವಾಗುತ್ತಿರುವವು. ಆದರೆ ಅವುಗಳ ಉಪ

ಯೋಗವನ್ನು ನಾವು ಸರಿಯಾಗಿ ಮಾಡಿಕೊಳ್ಳುತ್ತಿರುವೆಯೋ ? ನಮ್ಮಲ್ಲಿ ಜ್ಞಾನಪಿಪಾಸೆಯು ಹೆಚ್ಚಾಗಿರುವದೇ ? ನಾವು ಕೇವಲ ಪರೀಕ್ಷಾರ್ಥಿಗಳಿರುವೆವೇ ಹೊರತು ವಿದ್ಯಾರ್ಥಿಗಳಲ್ಲ. ಪರೀಕ್ಷೆಗಳಲ್ಲಿ ನಡೆಯುವ ಅನೇಕ ಬಗೆಯ ದುರ್ವ್ಯವಹಾರ ಗಳಿಗೆ ಏನು ಕಾರಣವು ? ಯಾವ ರೀತಿಯಿಂದಲಾದರೂ ಪರೀಕ್ಷೆ ಯಲ್ಲಿ ತೇರ್ಗಡೆಯಾದರೆ ಸಾಕೆಂದು ನಮ್ಮ ವಿದ್ಯಾರ್ಥಿಗಳು ಇಂದು ಅಪೇಕ್ಷಿಸುತ್ತಿರುವರು. ಆ ಜನ್ಮ ಬ್ರಹ್ಮಚಾರಿಗಳಾಗಿ ವಿದ್ಯಾಜ್ಞಾನದಲ್ಲಿ ತಲ್ಲೀನರಾಗಿದ್ದ ಪ್ರಾಚೀನರೆತ್ತ. ವಾಮಮಾರ್ಗ ವನ್ನು ಅನುಸರಿಸಿ ಹೆಚ್ಚು ಗುಣಗಳನ್ನು ಪಡೆಯಬೇಕೆಂಬ ಈಗಿನ ವಿದ್ಯಾರ್ಥಿಗಳೆತ್ತ ? ಆಗಿನ ಕಾಲದ ಗುರುಭಕ್ತಿಯೂ, ಶಿಷ್ಯ ವಾತ್ಸಲ್ಯವೂ ಇಂದು ಮಾಯವಾಗಿವೆ ! ಭರತ ಭೂಮಿಯಲ್ಲಿ ಯಾವಾಗಲೂ ಜ್ಞಾನಕ್ಕೆ ಹೆಚ್ಚು ಬೆಲೆಯಿದ್ದಿತೇ ಹೊರತು, ಧನಕ್ಕಲ್ಲ, ಅಧಿಕಾರಕ್ಕಲ್ಲ. ತೇಜಃಪುಂಜರಾದ ಋಷಿಗಳ ವಂಶಜ ರಲ್ಲವೇ ನಾವು ? ಜಗತ್ತಿನ ಜ್ಞಾನಕ್ಕೆ ನಮ್ಮ ಕೊಡುಗೆ ಏನು ?

ವಿಜ್ಞಾನರಂಗದಲ್ಲಿಯೂ ನಮ್ಮ ಜನರು ಹಿಂದೆ ಇರಲಿಲ್ಲ. ಕ್ರಿ. ಶ. ಪೂರ್ವದಲ್ಲಿಯೇ ಅವರು ಶಸ್ತ್ರಕ್ರಿಯೆಗಳನ್ನು ಮಾಡು ತ್ತಿದ್ದರು. ಖಗೋಲ ಶಾಸ್ತ್ರದಲ್ಲಿಯೂ, ಗಣಿತಶಾಸ್ತ್ರದಲ್ಲಿಯೂ ನಮ್ಮ ಪೂರ್ವಜರು ಅನೇಕ ಸಂಶೋಧನೆಗಳನ್ನು ಮಾಡಿದ್ದರು. ಇಂದು ನಾವು ಉಳಿದ ರಾಷ್ಟ್ರಗಳೊಡನೆ ಸರಿಸಮವಾಗಿ ನಿಲ್ಲ ಬೇಕಾದರೆ ವಿಜ್ಞಾನದಲ್ಲಿಯೂ ಹೊಸ ಪ್ರಯೋಗಗಳನ್ನು ಮಾಡ ಬೇಕಾಗುವದು. ನಮ್ಮ ಶಾಸ್ತ್ರಗ್ರಂಥಗಳನ್ನು ವಿಜ್ಞಾನದ ಒರೆ ಗಲ್ಲಿಗೆ ಹಚ್ಚಬೇಕಾಗುವದು. ಕೇವಲ ಹಳೆಯದು ಎಂದು

ಅದನ್ನು ಸ್ವೀಕರಿಸಬೇಕಾದ ಅವಶ್ಯಕತೆಯಿಲ್ಲ. ಹಳೆಯದೆಲ್ಲ ಬಂಗಾರವಲ್ಲ, ಹೊಸದೆಲ್ಲ ತ್ಯಾಜ್ಯವಲ್ಲ ಎಂಬ ಮನೋಭಾವವನ್ನು ತಾಳಬೇಕಾಗಿದೆ.

ಭಾರತವು ಇಂದು ಪ್ರಜಾಪ್ರಭುತ್ವ ರಾಷ್ಟ್ರವಾಗಿದೆ. ಇಂದು ಎಲ್ಲರೂ ಕಾಯಿದೆಯ ಎದುರಿನಲ್ಲಿ ಸಮಾನರು. ಯಾವದೇ ರೀತಿಯಿಂದ ಮೇಲು ಕೀಳು ಎಂಬ ಭಾವನೆಯು ನಮ್ಮಲ್ಲಿ ಇರಬಾರದು. ಪ್ರಾಚೀನ ಕಾಲದಲ್ಲಿ ಹೆಂಗಸರಿಗೆ ಶೂದ್ರರಿಗೆ ವೇದಗಳನ್ನು ಅಧ್ಯಯನ ಮಾಡುವ ಹಕ್ಕಿರಲಿಲ್ಲ. ಇಂದು ಯಾರು ಬೇಕಾದವರು ತಮಗೆ ಇಷ್ಟಬಂದ ವಿಷಯಗಳನ್ನು ಅಭ್ಯಾಸಮಾಡಬಹುದು. ಪ್ರತಿಯೊಬ್ಬರಿಗೂ ಇಂದು ಮತದಾನದ ಹಕ್ಕು ದೊರೆತಿರುವದು. ಈ ಹಕ್ಕನ್ನು ಸರಿಯಾಗಿ ಉಪಯೋಗಮಾಡಿಕೊಳ್ಳಬೇಕಾದರೆ ನಾವು ವಿದ್ಯಾವಂತರಾಗಬೇಕು. ಆಗಿನ ಕಾಲದಲ್ಲಿ ಶಿಕ್ಷಣವು ಸಾರ್ವಜನಿಕವಾಗಿರಲಿಲ್ಲ. ಸರಕಾರವು ಪ್ರತಿಯೊಂದು ಹಳ್ಳಿಯಲ್ಲಿಯೂ ಶಾಲೆಯನ್ನು ತೆರೆದಿರಲಿಲ್ಲ. ಋಷಿಗಳೇ ಆಶ್ರಮಗಳನ್ನು ಕಟ್ಟಿಕೊಂಡು ಪಾಠವನ್ನು ಹೇಳಿಕೊಡುತ್ತಿದ್ದರು. ಇಂದು ಪರಿಸ್ಥಿತಿಯು ಬದಲಾಗಿದ್ದರೂ ನಮಗೆ ಹಿಂದಿನ ಕಾಲದ ಋಷಿ ಮುನಿಗಳು ನಮಗೆ ಆದರ್ಶಪ್ರಾಯರಾಗಿರುವರು. ನಾವು ಅವರ ಸಾದಾಜೀವನ ಮತ್ತು ಉಚ್ಚ ವಿಚಾರಗಳನ್ನು ಅನುಸರಿಸಬೇಕಾಗಿರುವದು.

ಶಿಕ್ಷಣವೆಂದರೆ ಕೇವಲ ಓದುಬರಹವಲ್ಲ. ಪ್ರಾಚೀನರು ಹೇಳಿದಂತೆ 'ಶೀಲಂ ಪರಂ ಭೂಷಣಂ' ಎಂಬುದೇ ನಮ್ಮ ಧ್ಯೇಯವಾಗಬೇಕಾಗಿರುವದು. ಶೀಲವಿಲ್ಲದ ಶಿಕ್ಷಣವು ಜನಾಸ ಬಗೆ

ಯಲ್ಲಿ ನಮಗೆ ಉಪಯೋಗವಾಗಬಲ್ಲದು ? ಕೇವಲ ಪಾಂಡಿತ್ಯ ಪಡೆದರೆ ಸಾಕೆ ? ಪಾಚೀನರ ಪಾಂಡಿತ್ಯವೂ ನಮ್ಮಲ್ಲಿ ಇಲ್ಲ. ಶೀಲವಂತೂ ಮಾಯವಾಗಿದೆ. ಆದಕ್ಕಾಗಿಯೇ ಇಂದಿನ ಸಮಾಜವು ತತ್ತರಿಸತೊಡಗಿರುವದು. ಧರ್ಮಮಾರ್ಗದಿಂದಲ್ಲದೆ ಅನ್ಯಾಯದಿಂದ ಗಳಿಸಿದ ಧನದಿಂದ ಸುಖವಾಗಬಹುದೇ ? ಅಧರ್ಮದಿಂದ ಎಂದಿಗೂ ಸುಖವಾಗುವದಿಲ್ಲ. 'ಧರ್ಮಂ ಚರ. ಸತ್ಯಂ ವದ' ಎಂದು ಋಷಿಗಳು ಸಾರಿ ಹೇಳಿರುವರು. ಸ್ನಾತಕನು ತನ್ನ ವಿದ್ಯಾಭ್ಯಾಸವನ್ನು ಮುಗಿಸಿ ಮನೆಗೆ ಹೋಗುವಾಗ ಈ ರೀತಿ ಉಪದೇಶ ಮಾಡುತ್ತಿದ್ದರು. ಅಭ್ಯಾಸದಿಂದ ಪರಾವೃತ್ತನಾಗಬೇಡ ಎಂಬುದು ಅವರ ಉಪದೇಶಗಳಲ್ಲಿ ಬಹಳ ಮುಖ್ಯವಾದದ್ದು. ಅದರಲ್ಲಿ ಶಿಕ್ಷಕರಾದವರು ಯಾವಾಗಲೂ ಅಧ್ಯಯನದಲ್ಲಿ ನಿರತರಾಗಿರಬೇಕು. ನಾಲಂದಾ, ತಕ್ಷಶಿಲಾ ವಿಶ್ವವಿದ್ಯಾಲಯಗಳಿಗೆ ದೇಶಾಂತರಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದುದರ ಗುಟ್ಟೇನು ? ಅಲ್ಲಿಯ ವಿದ್ವಾಂಸರಿಂದ ಆಕರ್ಷಿತರಾಗಿ ಅವರು ಸಾವಿರಾರು ಮೈಲುಗಳನ್ನು ಸಂಚರಿಸಿ ಈ ವಿಶ್ವವಿದ್ಯಾಲಯಗಳಿಗೆ ಬರುತ್ತಿದ್ದರು. ಸಾವಿರಾರು ವರ್ಷಗಳವರೆಗೆ ಭಾರತವು ಜ್ಞಾನ ಜ್ಯೋತಿಯನ್ನು ಪಸರಿಸಿತ್ತು. ವಿದ್ವಾಂಸರು ಯಾವದೇ ರೀತಿಯ ಲೌಕಿಕ ಸುಖಗಳಿಗಾಗಿ ಆಸೆಪಡದೆ ಜ್ಞಾನಯಜ್ಞದಲ್ಲಿ ತೊಡಗಿದ್ದರು. ಇಂದು ಸಮಾಜದಲ್ಲಿ ಶಿಕ್ಷಕರಿಗೆ ಸರಿಯಾದ ಸ್ಥಾನ ಮಾನಗಳು ಇಲ್ಲದಂತಾಗಿವೆ. ಆ ಸ್ಥಾನ ಮಾನಗಳನ್ನು ದೊರಕಿಸುವದು ಶಿಕ್ಷಕರ ಸಾಮರ್ಥ್ಯವನ್ನು ಅವಲಂಬಿಸಿರುವದು. ಅವರು ಜ್ಞಾನಋಷಿಗಳಾದರೆ ಸಮಾಜವು ಅವರನ್ನು ಅಲಕ್ಷಿಸುವದು

ಸಾಧ್ಯವಿಲ್ಲ. 'ಸ್ವದೇಶೇ ಪೂಜ್ಯತೇ ರಾಜಾ ವಿದ್ವಾನ್ ಸರ್ವತ್ರ ಪೂಜ್ಯತೇ' ಎನ್ನುವದರ ಅರ್ಥವಾದರೂ ಏನು ? ಈ ಶತಮಾನ ದಲ್ಲಿಯೂ ಡಾ. ರಾಧಾಕೃಷ್ಣನ್‌ರಂಥ ಮಹಾ ವಿದ್ವಾಂಸರು ಜಗತ್ತಿನ ಮನ್ನಣೆಗೆ ಪಾತ್ರರಾಗಲಿಲ್ಲವೇ ? ಗೋಪಾಲಕೃಷ್ಣ ಗೋಖಲೆ, ಝಕೀರ ಹುಸೇನ ಮೊದಲಾದವರು ನಮ್ಮ ಗೌರ ವಕ್ಕೆ ಪಾತ್ರರಾಗಲಿಲ್ಲವೇ ? ನಮ್ಮಲ್ಲಿ ಯೋಗ್ಯತೆ ಇದ್ದರೆ ಸಮಾಜವು ನಮ್ಮನ್ನು ಗೌರವದಿಂದ ಕಾಣುವದು.

ವಿದ್ಯಾರ್ಥಿಗಳಲ್ಲಿ ಇಂದು ಅಶಿಸ್ತು ತಾಂಡವವಾಡುತ್ತಿರು ವದು. ಈ ಅಶಿಸ್ತಿಗೆ ಕಾರಣವೆಂದರೆ ವಿದ್ಯಾರ್ಥಿಗಳ ಮೇಲೆ ಶಿಕ್ಷಕರ ಪ್ರಭಾವವಿಲ್ಲದಿರುವದು. ಕೇವಲ ಜ್ಞಾನವನ್ನು ಕೊಡುವದು ಶಿಕ್ಷಕನ ಕೆಲಸವಲ್ಲ. ಶಿಲ್ಪಿಯು ಕಲ್ಲಿನಲ್ಲಿ ಕೆತ್ತಿ ಮೂರ್ತಿಗಳನ್ನು ಮಾಡುವಂತೆ ಭಾವೀ ಜನಾಂಗವನ್ನು ನಿರ್ಮಿಸುವ ಆದರ್ಶ ಶಿಕ್ಷಕರು ನಮಗಿಂದು ಬೇಕಾಗಿರುವರಲ್ಲಿ ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಯಮ, ದೇಶಾಭಿಮಾನ, ಸ್ವಾರ್ಥ ತ್ಯಾಗ, ಜ್ಞಾನಲಾಲಸೆ ಈ ಗುಣಗಳು ಬೆಳೆಯುವಂತೆ ನಮ್ಮ ಶಿಕ್ಷಕರು ಪ್ರಯತ್ನಿಸಬೇಕಾಗಿದೆ. ಪ್ರಾಚೀನ ಭಾರತದಲ್ಲಿ ಗುರು ವಿನ ಮಹತ್ವವನ್ನು ಅರಿತಿದ್ದರು. ಅದಕ್ಕಾಗಿಯೇ ಅವರು. 'ಆಚಾರ್ಯ ದೇವೋ ಭವ' ಎಂದು ಹೇಳಿದರು. ನಾವು ಅದಕ್ಕೆ ಯೋಗ್ಯರಾಗೋಣ. ಪುರಾತನರ ಆದರ್ಶಗಳನ್ನು ನಮ್ಮ ಮುಂದೆ ಇಟ್ಟುಕೊಂಡು ಸಾಗೋಣ. ಅಂದರೆ ಮಾತ್ರ ನಾವು ಪೂರ್ವಜರ ಋಣವನ್ನು ತೀರಿಸಿದಂತಾಗುವದು. ನಾವು ನಮ್ಮ ಕರ್ತವ್ಯದಲ್ಲಿ ತಪ್ಪಿದರೆ ಮುಂದಿನ ಸಮಾಜವು ನಮ್ಮನ್ನು ಕ್ಷಮಿಸ

ಲಾರದು. ನಮ್ಮ ಕರ್ತವ್ಯವನ್ನು ಶ್ರದ್ಧೆಯಿಂದ ಮಾಡೋಣ. ನಮ್ಮ ಪೂರ್ವಜರಲ್ಲಿಯ ಒಳ್ಳೇ ಗುಣಗಳನ್ನು ನಾವು ನಮ್ಮ ಶಿಕ್ಷಣ ಪದ್ಧತಿಯಲ್ಲಿ ಅಳವಡಿಸಿಕೊಳ್ಳಬೇಕು. ಪೂರ್ವಜರ ಜ್ಞಾನಲಾಲನೆಯು ನಮ್ಮಲ್ಲಿ ಬರಬೇಕಾಗಿದೆ. ನಾವು ಜ್ಞಾನ ಪಿಪಾಸುಗಳಾಗಬೇಕು. ಅಂದರೆ ಮಾತ್ರ ಜಗತ್ತಿನ ಪ್ರಗತಿಪರ ರಾಷ್ಟ್ರಗಳ ಮಾಲಿಕೆಯಲ್ಲಿ ನಮ್ಮ ಸಮಾವೇಶವಾಗುವದು. ನಮ್ಮ ಉಚ್ಚಪರಂಪರೆಯನ್ನು ನಾವು ಕಾಯ್ದುಕೊಂಡು ಬರಬೇಕು. ಜಗತ್ತಿನ ಜ್ಞಾನಕ್ಕೆ ನಮ್ಮ ದೇಶದ ಕೊಡುಗೆಯನ್ನು ಸಲ್ಲಿಸಬೇಡವೇ ? ರವೀಂದ್ರನಾಥ ಠಾಕೂರರು ಪ್ರಾಚೀನ ಭಾರತದ ಗುರುಕುಲಗಳ ಮಾದರಿಯಲ್ಲಿಯೇ ತಮ್ಮ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು. ನಿಸರ್ಗದ ಸನ್ನಿಧಿಯಲ್ಲಿಯೇ ಇದ್ದುಕೊಂಡು ವಿದ್ಯಾಭ್ಯಾಸ ಮಾಡುವದು ನಮ್ಮ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಆ ವೈಶಿಷ್ಟ್ಯವನ್ನು ರವೀಂದ್ರರ ಶಾಂತಿನಿಕೇತನದಲ್ಲಿಯೂ, ಕಾಂಗ್ರಿ ಗುರುಕುಲದಲ್ಲಿಯೂ ಕಾಣಬಹುದಾಗಿದೆ. ಇಂದು ಮಾನವನು ಅನೇಕ ಶೋಧಗಳನ್ನು ಮಾಡಿರುವನು. ಚಂದ್ರಲೋಕದಲ್ಲಿ ಪ್ರವೇಶಿಸಿರುವನು. ಆದರೆ ಈ ಭೂಮಿಯ ಮೇಲೆ ಮಾನವನಾಗಿ ಹೇಗೆ ವಾಸಿಸಬೇಕು ಎಂಬುದನ್ನೇ ಅವನು ಅರಿಯನು. ನಿಸರ್ಗದ ಸಾನಿಧ್ಯದಲ್ಲಿ ಇದ್ದುಕೊಂಡು ಅವನು ಮಾನವನಾಗಬೇಕಾಗಿರುವದು.

—o—

# ಆಧಾರ ಗ್ರಂಥಗಳು


1) Ancient Indian Education

–Dr. R. K. Mookerji

2) Education in Ancient Iadia

–Dr. A. S. Altekar

3) Indian Education in Ancient, and Later Times –Dr. F. E. Keay

4) History of Education in India Part-I

–Prof. V. P. Bokil

## ಉಪನ್ಯಾಸ ಗ್ರಂಥ ಮಾಲೆಯ
## ಇತ್ತೀಚಿನ ಪ್ರಕಟನೆಗಳು

೧. ಹಾವುಗಳು ಮಾನವನ ಮಿತ್ರ-ಶತ್ರು
—ಎನ್. ಟಿ. ಮೋಟೆಬೆನ್ನೂರ

೨. ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳು
—ಎ. ಆರ್. ಪಾಟೀಲ

೩. ವೇದಗಳು, ವೇದಾಂಗಗಳು ಮತ್ತು ವೇದಾಂತ ತತ್ವ
—ಬಿ. ಎನ್. ಕೃಷ್ಣಮೂರ್ತಿ

೪. ಶಿರಾಲಿಯ ಗೊಂಡರು —ನಾರಾಯಣ ಯಾಜಿ

೫. ಇಂಗ್ಲೀಷ ಸಾಹಿತ್ಯದಲ್ಲಿ ಹಾಸ್ಯ ಮತ್ತು ವಿಡಂಬನೆ
—ವ್ಹಿ. ಕೆ. ನವಲಗುಂದ

೬. ಮಂತ್ರಾಲಯದ ಶ್ರೀ ರಾಘವೇಂದ್ರ ಸ್ವಾಮಿಗಳವರ ಚರಿತ್ರೆ —ಜಿ. ಕೃಷ್ಣರಾವ

೭. ಗ್ರಂಥಾಲಯ ಸೇವೆ —ಎಸ್. ಎಲ್. ಸಂಗಮ

೮. ಶರಣ ಸಾಹಿತ್ಯ —ಬಸವಣ್ಣೆಪ್ಪ ಸೋ. ಗೊರವರ

೯. ಉಷ್ಣ ಮತ್ತು ಅದರ ಸ್ವರೂಪ —ಬಿ. ಕೆ. ಚಳಗೇರಿ

೧೦. ಸಾಂಸರ್ಗಿಕ ರೋಗಗಳು ಮತ್ತು ಅವುಗಳನ್ನು ತಡೆಗಟ್ಟುವ ಕ್ರಮಗಳು —ಪಿ. ಎಸ್. ಬಣಕಾರ

ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ -೫೮೦ ೦೦೩